# ಚಂದ್ರಖಂಡ

ಮತ್ತು

## ಕೆಲವು ಸಣ್ಣ ಕಾವ್ಯಗಳು



ಸೇಡಿಯಾಪು ಕೃಷ್ಣಭಟ್ಟ






ವಿಶ್ವ ಕನ್ನಡ ಸಮ್ಮೇಳನ
14-3 ಎ, ನೃಪತುಂಗ ರಸ್ತೆ
ಬೆಂಗಳೂರು-560 002

Vishwa Kannada Sahitya Male

CHANDRAKHANDA — A collection of poems by Sediyapu Krishna Bhatta.

Published by K. Jayacharya, K.A.S., Additional Director, Directorate of Kannada & Culture (Vishwa Kannada Sammelana), 14/3 A, Nrupathunga Road, Bangalore-560 002.





1983. 5,000, Copies

ಬೆಲೆ : ಒಂದೂವರೆ ರೂಪಾಯಿಗಳು



ಅಶ್ವತ್ಥ್ ಪ್ರಿಂಟರ್ಸ್
೪೪೩, ೪೪ನೇ ಅಡ್ಡರಸ್ತೆ, ಒಂದನೇ ಮುಖ್ಯರಸ್ತೆ
೮ನೇ ಹಂತ, ಜಯನಗರ, ಬೆಂಗಳೂರು-೫೬೦ ೦೮೨

ಆರ್. ಗುಂಡೂರಾವ್
ಮುಖ್ಯಮಂತ್ರಿ




ವಿಧಾನಸೌಧ
ಬೆಂಗಳೂರು

ದಿನಾಂಕ : ೧೮-೯-೮೨

# ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ· ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆ ಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯಮಂತ್ರಿ

## ಪರಿವಿಡಿ

## ಬೆಳಗಿನ ತಂಗಾಳಿ

ಕನಸನು ಮುಸುಕನು ತೊಲಗಿಸಿ ಬರುತಿದೆ ಬೆಳಗಿನ ತಂಗಾಳಿ
ಮುಗಿಲ ಕೆಸರ ತುಳಿದಾಡುವ ಬೆಳ್ಮುಗು! ಓವೋ ತಿಳಿಗಾಳಿ.
ಉಷೆಯು ಪಥಕೆ ಬೆಳ್ಳಿಯು ಕೈದೀವಿಗೆ ಹಿಡಿದೈತರುವಾಳಿ
ಗಿರಿಮುನಿಯು ವನಶ್ಮಶ್ರುಗಳೆಡೆಯಿಂದೊಗೆವೋಂಕಾರಾಳಿ.
ಉದಯೋತ್ಸವರಥವಳೆಯೆ ಬಿಚ್ಚುತಿದೆ ಹೊಸ ನೇಣಿನ ಸುರುಳಿ!
ಶಿವದರ್ಶನ ಸಂಕಲ್ಪದಿ ಕುಳಿತಿವೆ ಹುಲ್ಲಲಿ ಹನಿಯೋಳಿ—ಓವೋ
ಬೆಳಗಿನ ತಂಗಾಳಿ—ಸೂಸುತ
ಬರುತಿದೆ ಮುದದಾಳಿ !

ಸಂಪಗೆಯುಚ್ಚಸ್ಥಾಯಿಯು ಕಂಪನು ಮಂದ್ರಿಸುತೂದುತಿದೆ
ತಂಪಿನ ನೆಲಸಂಪಗೆಯೊಳಗಂಪನು ರುಂದ್ರಿಸುತಲೆಯುತಿದೆ
ಶೇಫಾಲಿಕೆಯಿಳಿದಿಂಗಳ ಸುರಭಿಯು ತಂದ್ರಿಸಿ ತೂಗುತಿದೆ
ನಾದವೊ ಗಂಧವೊ ವಿಾಯಿಸುತಿದೆ, ಮನ ಭೇದವನರಿಯದಿದೆ—ಓವೋ
ಮರೆಯಿತು ಚಿಂತೆಗಳ—ಏರಿತು
ಹರ್ಷದ ಹಂತಗಳ!

ಮುಗಿಲ ಕುದುರೆಗಳನೇರುತ್ತೇರುತ್ತ ಬರುತಿವೆ ರಾಗಾಳಿ
ಕುಣಿವೆಲೆ ಮರಗಳ ಮರೆಯಲಿ ಕಿಲಕಿಲ ನಗುತಿವೆ ಪಿಕದೋಳಿ
ಕೆರೆ ಹರಿನಾಮುವನಲೆಯಲಿ ಜಪಿಸುತ ತುಂಬಿದೆ ಮೌನದಲಿ
ಮುಗುಳಲಿ ಕೈಮುಗಿದರಳಲಿ ಮೊಗದೆರೆಯುತ್ತಿವೆ ಹೂಬಳ್ಳಿ—ಓವೋ
ಬೆಳಗಿನ ತಂಗಾಳಿ—ಮುಂಬೆಳ-
ಗೇರಿಹ ಜೋಕಾಲಿ!

ಬೆಳಕಿನ ಬಲೆ ಹರ್ಷದ ಬಲೆ ಬಣ್ಣದ ಬಲೆ, ಓ ಬಲೆಗಾರ!
ಅಲೆಯಲೆಯಾಗಿಯೆ ಬೀಸಿ ಬೀಸಿ ಹಿಡಿದೆಯಲೋ ಕಲೆಗಾರ!
ಸಿಲುಕಿದೆ ಸಕಲ ಸ್ಥಾವರ ಜಂಗಮ! ಪುಲಕಿಸಿ ಕಲೆಯುತಿವೆ,
ಕಿರಣಾವಳಿಗಳು ಕರುಣಾವಳಿಯಲಿ ಹೆಣೆದಿರೆ ಕುಣಿಯುತಿವೆ—ಓವೋ
ಗೆಲವಿನ ತಂಗಾಳಿ—ಬಿಚ್ಚಿದ
ಸುಖನೌಕೆಯ ಹಾಯಿ!

ದಿನದಿನ ಯುಗಯುಗ ನಡೆವೀ ಲಾಸ್ಯದ ಕನಕಸೂತ್ರಧಾರ!
ಇಳೆಮುತ್ತೈದೆಗೆ ಹಳದಿ ಕುಂಕುಮವ ಬಳಿಯುವೆಳೆಯ ಪೋರ!
ಬೆಳಕಿನ ಪಳಿಕಿನ ಪಾರಾವಾರಾದೊಳೀಸಾಡುವ ಹಂಸ!
ಸಕಲವ ಒಂದಪ್ಪುವ ಸೌಹಾರ್ದದ ದೇವತಾವತಾರ!—ನೀನೇ
ಜಗದುಸಿರಿಗೆ ತಾಯಿ—ಓವೋ!
ನಮೋ ನಮೋ ಕಾಯಿ!

೧೯೬೮

# ಖಂಡಚಂದ್ರ

(೧)

ಅಮೃತವೆ ಮುದ್ದಿಸೆ ಹುಟ್ಟಿದೆ ಹಾಲ
ಕಡಲಿನ ಚೊಚ್ಚಲ ಬಸಿರಲಿ, ಸಿರಿಯ
ನಳಿದೋಳನು ಹಿಡಿದಾಡಿದ ಬಾಲ
ನಲಿದೇರಿದೆ ಬಿಳಿಯಾನೆಯ ಮರಿಯ

ಗಿರಿಜೆಯು ರಮಣನ ಜಡೆಬಳ್ಳಿಯಲಿ
ಮುಗುಳಿ ಮುಗುದೆ ಗಂಗೆಯ ಮಡಿಯೇರಿ
ಶಿವ ಕಂದನ ಮುಂಡಾಡಲು ಕಂಡೆ
ಕುವರನ ಕೈಗಳ ಮಿಸಲುಗೊಂಡೆ

ಬಾಲತನದಿ ಮೆಯ್ ತುಂಬುವ ಮೊದಲೆ
ಹಾರಿದೆ ತಾರೆಯ ಸನ್ನೆಗೆ ನಭಕೆ
ಸೂರೆಗೊಂಡು ಮೊಳೆಮಲ್ಲಿಗೆ ಚೆಂಡ
ಜೋಡೆಯಾಡಿದಳೆ ಹಾ ಪೊಡೆಸೆಂಡ!

ಕರೆಯನು ಮೆಯ್ಯಲಿ ಕಂಡುಳುಕಿದೆ, ಹೊಂ-
ಗಿರಣವ ಕೊಂಡದ ಕಳೆಯುಲು ರವಿಯು
ಬಳಿಸಾರಿದೆ, ಮಿತ್ರನೆ ಗರ್ವದಲಿ
ಕಡೆಗಣಿಸಲು ಕುಂದಿದೆ ಮರುಕದಲಿ;

ಸಿರಿಯೊಡೆಯರ ವಿಬುಧರ ಕೆಳೆ ಸಾಕು
ಕರೆಯಾಗಲಿ ಮರಿಯಾಗಲಿ ಬೇಕು
ಬಸಿರ ಬೆಳಕೆ ಬಾ ಕಂದಾ ಎನುತ
ಕರೆದು ಕಡಲು ಕಿಡೆವುದು ನೆಲಕಳುತ.

(೨)

ಕುಂದಿದರೇನೈ ಕಂದಿದರೇನೈ
ಸುಂದರ ನಿನಗೆಣೆ ಭುವನದೊಳಾರೈ?
ಒಂದರೆ ನೋಟವನಾದರು ಬೀರಿ
ಇಂದಿರುಳನು ನಗಿಸೈ ದಯೆದೋರಿ.

ನಿನ್ನೊಳಗದಿರಿಗೆ ತನ್ನೊಳಿಯೆದೆಯ
ಮುನ್ನವೇ ಮುಡಿಪಿಟ್ಟೀ ಕೋಮಳೆಯ
ಕಣ್ಣಾರಳದೆ ಮುಚ್ಚಿರಲಿರುಳಂಜಿ
ಕಣ್ಣೀರಿಡುವುದು ಮರದಡಿಗಳಲಿ

ಬಾಡಿದ ಬೆಳ್ಮುಗಿಲನು ಮೆಯ್ದೊಡವಿ
ಗಾಳಿಗೆ ಬೆಳ್ದಿಂಗಳನಿನಿತೂಡಿ
ಕಾರ್ಗತ್ತಲೆಯಲಿ ಕರಗುವ ನಿಶೆಯ
ಕೈವಿಡಿಯುತ ಮುದದಲಿ ನಡೆಯಿಸೆಯಾ?

ಇರುಳರಳಲಿ ಮೊಗವರಳಲಿ ಚಂದ್ರ
ಗಗನಮಂಡಪಕೆ ಬಾ ಗೆಲವಿಂದ
ದಾರಿಯ ನಿಟ್ಟಿಸಿ ನಿಟ್ಟಿಸಿ ನಿಂದು
ತಾರಗೆಗಳು ನಂದುವ ಮೊದಲಿಂದು!

೧೯೨೯

## ಕಾರ ಸಂಪಗೆ

ತರಳೆ ನೀನೆಂತಿಹೆಯೋ ಏನ ಗೆಯ್ಯುತಲಿಹೆಯೊ
ಎನುವ ವಿವರವ ತಿಳಿಯಲಾಶಿಸುವೆನಾತುರಿಪೆ
ಹಗಲ ನಗುನಗುತ ಕಳೆವೆಯೊ, ಅಲ್ಲದಿರಲೆನ್ನ
ಅಗಲಿಕೆಯ ನೆನಹಿನಲಿ ಮನವ ಮುದುರಿಸುತಿಹೆಯೊ?

ಕೆಲಸದವಸರಗಳಲಿ ಮನೆಮಕ್ಕಳಾಟದಲಿ
ಹಿರಿಯರುಪಚಾರದಲಿ ಪೂಜೆನೋಡುವುದರಲಿ
ಬೆವರ ಬಿಂದುಗಳೆ ಸುಖರಸವಾಗಿ ನಲಿನಲಿದು
ಗೃಹದ ಸೌಭಾಗ್ಯಲಕ್ಷ್ಮಿಗೆ ಕೆಳದಿಯಾಗಿಹೆಯೊ?

ಮೂಲೆಯಲಿ ಕುಳಿತು ರಾಮಾಯಣದ ನೆಲಕಿಟ್ಟು
ತಲೆಬಾಗಿ ಸಣ್ಣದನಿಯಿಂದೋದುವೆಡೆಯಲ್ಲಿ
ಕಾರಿರುಳು ಮರವಿನನನೆಂತಂತೆ ನೆನೆದೆನ್ನ
ಹಾರಯಿಸಿ ಕಣ್ಣೀರ ಹನಿಹನಿಸಿ ಕೊರಗುವೆಯೊ?

ಹಣದಾಸೆ ಹೆಸರಾಸೆ ಬಹುಮಾನದಾಸೆಗಳ
ಸೆಳವಿಂದ ಸೆಳೆಯಲಿಕೆ ಸತಿಯಾಸೆ ಸಾಲ್ದಪುದೆ
ಎನುತೆಣಿಸುತಿಹೆಯೊ ಅಲ್ಲದಿರೆ ಪುರುಷರಿಗೇನು
ಚೆಲುವೊಗಕೆ ಕಡಮೆ ಎಂದೆನುತ ಶಂಕಿಸುತಿಹೆಯೊ?

ತಂದೆಯೊಡನಂದು ಸುಖದಿಂದಿದ್ದೆ, ಮದುವೆಯಲಿ
ಬಂದಪುದು ತನಗೆ ಸುಖಸಾಮ್ರಾಜ್ಯವೆನುತಿದ್ದೆ
ಇಂದಿಗದು ಕನಸಾಯ್ತು, ದುಃಖವೇ ನನಸಾಯ್ತು
ಮುಂದೆಂತು ದಿನಗಳೆಯಲೆಂದು ಕಳವಳಿಸುವೆಯೊ?

ಹಾರಗಳ ಬಯಸಿಲ್ಲ ಸೀರೆಗಳ ಕೇಳಿಲ್ಲ
ತವರೂರ ನಂಟರನು ನೋಳ್ಪಾಸೆಯುಸಿರಿಲ್ಲ
ಸೇವೆಯಲಿ ಮನವರಿತು ಕೊರತೆಯೆಸಗಿದೆನಿಲ್ಲ
ಕಾಣದೇತಕೆ ಬರವೆನುತ್ತ ಬಿಸುಸುಯ್ಯುವೆಯೊ?

ಕಣ್ಣು ದಾರಿಯ ನೋಡಿ ಬಳಲಿ ಒಳಸರಿದಿಹುದೆ
ಕದಪು ಕೈಯೊತ್ತಿ ಬೆಳ್ಳರಿಸಿಹುದೆ ಮಾಸಿಹುದೆ
ಶೋಕಭಾರದಿ ನಿಂದು ಕಾಲುಳುಕಿ ನೋಯುವುದೆ
ಕುದಿವೆದೆಯ ನಿಡುಸುಯ್ಲ್ಗೆ ಸುಗಿದು ಬಾಯೊಣಗಿಹುದೆ?

ಅಮ್ಮಮ್ಮ ಕಲ್ಲೆದೆ ಎನ್ನುತ್ತ ದೂರುತ್ತಿಹೆಯೊ
ಕೆಲಸಗಳಿಗಾಗಿ ತಳುವಿರಬೇಕೆನುತ್ತಿಹೆಯೊ
ಕರುಣಾಳುವಿನಲಿ ಶಂಕಿಸಿದ ಪಾಪಕ್ಕಾವ
ಪರಿಹಾರ ರಾಮ ರಾಮಾ ಎಂದು ಕರುಗುವೆಯೊ?

—ಅರಿತೆನರಿತೆನು ಬಗೆಯ ಸಾಕಳಲದಿರು ಬಾಲೆ
ಒರಸು ಪುಸ್ತಕವೆ ಕಣ್ಣೀರಿನಲಿ ನೆನೆದಿಹುದು.
ನಿನಗೆ ಸಂಗಡಿತಿ ಊರ್ಮಿಳೆ ಇಹಳು ಬಾಗಿಲಲಿ
ಪರಿಕಿಸದರೊಳು, ಬೇಗ ಬರುವೆ ನಾನಷ್ಟರಲಿ.

ಹಗಲು, ನಿನ್ನೆರಕದಲಿ ಮುಳುಗಿ ಮಿಾಯುವ ಬಯಕೆ
ನಡುಗುವೆನ್ನೆದೆಗಿರುಳು ನಿನ್ನ ನೆನಹೇ ಹೊದಕೆ
ಒಲೆವೆನ್ನ ಮನಕಿಹುದು ನಿನ್ನ ಗುಣದಾಲಂಬ
ಹಲವ ಹಂಬಲಿಸದಿರು ಮರೆದು ತಳುವಿದುದಲ್ಲ.

ಬೇಸಗೆಯೊಳಾನಂದು ನಿನಗಿತ್ತೆ ಸಂಪಗೆಯ
ಸೂಡಿ ನೀನದನು ತಣಿಸಿದೆ ಎನ್ನ ಕಣ್ಮನವ.
ಅದು ತಂಪೆ ಕಾವೆ? ಹೇಳ್ ಈಗ ಕಾರೊಳು ಕಂಡೆ
ಎದೆ ಕರಗಿ ನೀರಾಗಿ ಕಣ್ಣನಲಿ ಸುರಿಯುತಿದೆ!

ಕೈಯಲ್ಲಿ ಕೆಲಸ, ಮನದಲ್ಲಿ ನಿನ್ನಯ ನೆನಹು,
ಬಾಯಲ್ಲಿ ಮಾತು, ಬಗೆಯಲ್ಲಿ ನಿನ್ನಯ ಭಾವ.
ಕಣ್ಣಲ್ಲಿ ನಿದ್ದೆ, ಕನಸಿನಲಿ ನಿನ್ನಯ ಕಾಣ್ಕೆ,
ಮೆಯ್ಯಲ್ಲಿ ಉಸಿರು, ನಿನ್ನಲ್ಲಿ ಎನ್ನಯ ಜೀವ.

ರಮಣಿ ನಿನ್ನೆಡೆಗೆ ನಾ ಬಾರದಿರುವೆನೆ? ನಿನ್ನ
ಮರೆದಪೆನೆ? ಬಂದು, ಪಿಡಿದಪ್ಪಿ ಮುದ್ದಿಸಿ ಮುಡಿಯ
ನರುಗಂಪ ಮೂಗಿಂದೆ ಸವಿದು ಕರಕರೆಗಳೆವೆ
ಜಗದೊಡೆಯನೊಲುಮೆಯಿಂ ಸುಖವಾರ್ತೆಗಳನೊರೆವೆ.

೧೯೨೭

# ಮುಗುದೆ

ಜವ್ವನದಿ ಮಿಂದೊದ್ದೆಯುಡೆ ಕೊಸರಲಾಗಿ ಜವದಲಿ ನಡೆಯಲಾರಳಿವಳು
ಲಜ್ಜಾವಗುಂಠನವು ಕಣ್ಣ ಮುಸುಕುವುದಾಗಿ ಮೊಗವೆತ್ತಲಾರಳಿವಳು
ಚೆಂದುಟಿಯ ನಗೆಯಿಂದ ಬಿಗಿದಂಟಿಸಿದಳಾಗಿ ಬಾಯ್ದೆರೆಯಲಾರಳಿವಳು
ಎದೆ ಬಿರಿವುದಾಗಿ ಕೈಬೀಸಲಾರದೆ ಬಳುಕಿ ಮೌನದಲಿ ಮೆಲುನಡೆವಳು.

ಹೂಮೆಯ್ಯನಳಿಗಣ್ಣ ಮುತ್ತುವುದೆನುತ್ತಲೋ, ಮಾನತಪನಕ್ಕಳುಕಿಯೋ,
ಸೆರಗನೇಕಡಿಗಡಿಗೆ ಹಸನಿಸುವೆ ಬಲಮುರಿಯ ಕೊರಳ ಕಂಬುವ ಮರಸಲೋ?
ಅಲ್ಲದಿರಲೆದೆಯಲ್ಲಿ ಕೊರತೆಯಿಹುದೇನಬಲೆ? ನಮ್ಮೊಡನೆ ಹೇಳದಿಹೆಯಾ?
ನಾವನ್ಯರೇ? ಮುಗುದೆ ನೀನುಸಿರದಿರೆ ಬಗೆಯಲಾರೆವೇ ನಿನ್ನ ಬಗೆಯ?

ನೆಲವ ನಿಟ್ಟಿಸಿ ನಡೆವೆ ಬಿರಿವೆದೆಯ ಮುತ್ತುಗಳ ಸರಕೆ ನಾಯಕರುತುನವ
ಹುಡುಕಿ ಪಡೆವೆನೆನುತ್ತ! ನೆಲದೊಳೇನಿಡುಕಿಹರೆ ಜೀವದಾನಂದಮಣಿಯ?
ಬಯಲಾಸೆಯಿದು ಬಾಲೆ! ಹುಡುಕಿದರೆ ದೊರೆಯದದು ಬಳಿಗೆ ತಾನಾಗಿ
ಬಹುದು;
ನಿನಗೆ ಬೇಕಾದರದು ಕಣ್ಗೊನೆಯ ಕಾಂತಿಯಲಿ ಸ್ನೇಹದೀಪಕೆ ಕುಡಿಯಿಡು।

ಅದನಾವು ತಿಳಿದಿಹೆವು, ಕಂಡಿಹೆವು, ಕಾಣಿಪೆವು! ಕುರುಹುಗಳನರಿಯಿಸುವೆವು.
ಮಿನುಗುತಿಹ ಕಲ್ಲಲ್ಲ ಬೆಲೆಗಟ್ಟಲಳವಲ್ಲ ಜೀವಿತಲತೆಯ ಕಲಿಕೆಯು!
ನಿನ್ನ ಕಂಕಣದ ಕಿರುದನಿಗೆ ಕಂದೆರೆಯುವುದು, ಬೊಗಸೆಗಂಗಳ ನೋಟದಿ
ಉಯ್ಯಾಲೆಯಾಡುವುದು. ನಿನ್ನ ಮುಂಗುರುಳುಗಳ ಮಡಿಲಲ್ಲಿ ಪವಡಿಸುವುದು.

ಅತ್ತ ಕಿವಿಗೊಡು ತರಳೆ! ಕತ್ತಲೆಯ ತೆರೆಮರೆಯೊಳಂತರಂಗವ ನುಡಿವುದು;
ದುಗುಡದಲಿ ನೀ ಸೆರಗನುಗುರಿಸುತ ಕುಳಿತಾಗ ಬಿಂಬಿಪುದು ಕಂಬನಿಯೊಳು.
ಅಂತಾಗೆ ಕೈಗಳವೆ? ನಿನಗೆ ಬೇಕಾದರದು ಸ್ನೇಹದೀಪಕ್ಕೆ ನಮಿಸು!
ಕರವ ಸಂಪುಟಗೊಳಿಸಿ ಕಣ್ಮುಚ್ಚಿ ತೆರೆವಾಗ ಹೃದಯರಂಗದಿ ನಲಿವುದು.

# ಮುತ್ತು

ಅರೆಬಿರಿದ ಶಕ್ತಿಯಲಿ
ಎಳನಗೆಯ ಮಿನುಗಿಸುವ
ಕಿರುಹರಳೆ ನಿನ್ನ ಮೊಗವ
ಪರಿಕಿಸಲು
ಕನಿಕರವೆ ಕೊರೆವುದೆದೆಯು,
ನಂದಿಪುದು
ನಿಡುಸುಯ್ಲು ಬಗೆಯ ನೊರೆಯು.

ಜಗದ ಸೊಬಗಿನ ಕಣ್ಣ
ತೆರೆದೆ ನೀ ಮೆಯ್ಮರೆದೆ
ಬರುವ ಗಳಿಗೆಗಳನರಿಯೆ!
ಸಂತಸದ
ಕರಡಿಗೆಯು ನೋಡೆ ಮರೆವೇ;
ಕರಕರೆಯ
ಒರತೆಯೆಂದೇಂಬುದರಿವೇ.

ಆವ ಕೈಯನು ಹಿಡಿವೆ
ಆವೆದೆಯ ತಣಿಯಿಸುವೆ
ಭಾವಿಸಲು ನಗೆಯಡಗದೇ?
ಕಂಟಕವು
ಕೊರೆವಾಗ ತಡೆಯಲಹುದೇ?
ಪಾಪಿಗಳ
ಕೊರಳ ತಕ್ಕಿಸಲು ಬಹುದೇ?

ಸೆರೆಯೆಂದೆಯ ಮರೆಮಾಡಿ
ಮೊಗಕೊಂದು ಮಿರುಗೂಡಿ
ಕರಗುವುದೆ ಹಣೆಬರಹವು?
ಕಿಚ್ಚಿನಲಿ
ಮರುಗಿಸದೆ ಮಾಣದಿರವು.
ತಾಯ್ಬಸಿರ
ಬರಿದಾಗಿಸಿದುದೆ ಫಲವು?

ದಾರಿ ನಿಟ್ಟಿಪ ಸತಿಯ
ಕಣ್ಣಿಂದ ಸಂಜೆಯಲಿ
ಮೀರ್ವ ಹನಿಯೊಡನೆ ಮಿರುಗಿ
ಪ್ರೇಮದಲಿ
ಸೋರ್ವ ಹನಿಯೊಡನೆ ಕರಗಿ
ನೀರಿನಲಿ
ಸೇರನಂತತೆಯ ತಿರುಗಿ.

೧೯೨೭

 

# ಮದಾಲಸೆಯ ಜೋಗುಳ ಹಾಡು

ಕೆಸರ ತುಳಿದು ನೀರೊಳಂಟದೆ ಮೇಗೆ
ಹೃದಯಸೌರಭವನೊಪ್ಪಿಸಿ ಮಿಸಲಾಗೆ.
ತಾವರೆಯಂತೆ ಮದಾಲಸೆಯರಳಿ
ಮಾರಿ ನಿಂದಳು ಸಂಸಾರದ ಸರಸಿಯಲಿ.

ಎರೆಯನೆದೆಯ ತಂತಿಯನು ಮಿಡಿಯುವಳೋ,
ಬಲಿದ ಮೋಹದ ಶೃಂಖಲೆಯ ಸಡಿಲಿಪಳೊ,
ತುಡುಕಿ ಕಾಲನ ಕೈಯ ಪಾಶವೆಳೆವಳೋ,
ಮಡದಿ ತನ್ನಯ ಮುದ್ದುಮಗನ ತೂಗುವಳೋ,

"ಮರಿ ಗಿಳಿಯೇ! ವಿಧಿ ಬರೆದೊಂದು ಸುಳಿಯೇ!
ಪರಮರಸವೆ ಕೋಡಿ ಘನಿಸಿದ ಹರಳೇ!
ಗಗನವನಳೆವ ಸುಪರ್ಣನೆಂದರಿಯೆ,
ಸಿಲುಕಿ ನೀನಸ್ಥಿಪಂಜರದಲಿ ನಲಿವೆ!
— ಜೋ ಜೋ,

"ಸ್ವರ್ಗದ ಸ್ವಾತಿಗೆ ಕಡಲಲ್ಲಿ ಬಿದ್ದೆ,
ಸುಪ್ತಿವಡೆದು ಮುತ್ತಿನಂತೆ ಮೇಲೆದ್ದೆ;
ಯಮನ ಸೋದರಿ ಹಾರಕೆಂದೊಯ್ವ ಮೊದಲೆ
ಶಿವನಕ್ಷಮಾಲೆಯ ಮಣಿಯಾಗು, ಹಸುಳೆ!
— ಜೋ ಜೋ.

"ತನುವೆಂಬ ಕೊಳವಿಯೊಳಾಸೆಯ ತುಂಬಿ
ಜರೆಯುಚ್ಚುಗೋಲಿಂದ ಶತಮುಖವಾಗಿ
ಹೊರಹೊಮ್ಮಿಸುವ ಬನ್ನ ವಿಧಿಯಿಾವ ಮೊದಲೆ
ಕೊಳಲಾಗಿ ಕೊಡು ಪರಮಾತ್ಮನ ಕೈಗೆ.

—ಜೋ ಜೋ.

"ಎನಿತೋ ಭವದ ಸುಕೃತವನಡಪಿಟ್ಟಿ
ನೆಲಕರೆಗಳಿಗೆಗೊಡೆಯುರಲಿ ಹುಟ್ಟಿ;
ಅಮೃತವ ಮೊಗೆವ ಗಿಂಡಿಯೆ! ಕೊಬ್ಬ ಮೊಗೆವ
ಅರಸಿಕೆಗ್ಗೈತಂತೆ, ತೆಗೆ ತೆಗೆ ಮನವ!

—ಜೋ ಜೋ.

"ತಣಿವ ಹೂಳಿದ ಗೋರಿಗಲ್ಲೊ, ಗದ್ದುಗೆಯೊ?
ಮದದ ಪರ್ವತದೊಣಹುಲ್ಲೊ, ಚಾಮರವೊ?
ತೊಡುವಾಭರಣವೆಲ್ಲ ಸುಡಲಿಹ ಕೆಂಡ
ಯಮನೂರಿಗೂರುಗೋಲಾ ರಾಜದಂಡ.

—ಜೋ ಜೋ.

"ಸಿರಿವಂತಿಕೆಯು ಬಾಳು ಮದನನ ಬಾಳು!
ನೆರೆವ ಹರೆಯುದ ಬೆಂಕಿಯೊಳದು ಕಾದು
ಹೃದಯತೀರ್ಥವ ಹೀರಿ ಹರಿತವು ಮಿಾರಿ
ಕೊರೆಯೆ, ಬದುಕಲುಂಟೆ ನಿಜಸುಖವಲ್ಲಿ?

—ಜೋ ಜೋ.

"ಕಣ್ಗಳ ಮುಸುಕಿಸಿ, ಎದೆಯ ನಡುಗಿಸಿ,
ಮಾರ್ಗವ ಮರೆಯಿಸಿ, ಕಾಲ ಕುಸಿಯಿಸಿ
ಕಾರ್ಗಾಲದಿರುಳಂತೆ ಕಾಮನ ಸರಳು ,
ಭೋರ್ಗರೆಯುವ ಮುನ್ನ ನಿಜಧಾಮಕೇರು!

—ಜೋ ಜೋ."

೧೯೩೬

## ವಿಜಯನಗರಧ್ವಂಸ

ಲಕ್ಷ್ಮಿ ಮೆಚ್ಚಿ ಮೆಚ್ಚಿ ಕುಣಿದ
ನಾಟ್ಯರಂಗದಲ್ಲಿ ಭೂತ-
ಯಕ್ಷರಕ್ಷರಂದು 'ಕೋಲ' ಕುಣಿಯುವಂತೆ ಕಂಡಿತು;
ಹಜ್ಜೆಗಳಲಿ ನೂಪುರಗಳ
ರತ್ನರಾಜಿಯುಲಿದ ರಾಜ-
ಮಾರ್ಗದಲ್ಲಿ 'ಗಗ್ಗರ'ಗಳ ಘರ್ಘರರವ ಕೇಳಿತು.

ಸಿರಿಯ ಮಣಿಯು ದೇಗುಲದಲಿ
ತುದಿಯ ಮಾಡದಲ್ಲಿ ತೂಗಿ
ತೊನೆದ ಘಂಟೆ ಕಡಿದು ನೆಲಕುರುಳ್ದು ಬಿರಿದು ಹೋಯಿತು!
ಹುರುಡೆ ಹುಟ್ಟುಗುಣದ ಕಾಲ-
ದನುಜ ನಿರ್ಘೃಣೆಯಲಿ ಬೇಳ್ದ
ಪುರುಷವೃಷಭಮೇಧಧೂಮ ಸುಳಿದು ಸುತ್ತಿ ಮುತ್ತಿತು.

ಕನ್ನಡಿಗರ ಭಾಗ್ಯನಿಧಿಯು
ಭರಿತದಲ್ಲಿ ಸೂರೆಗುಡಿವ
ಹುಮ್ಮಸದಲಿ ಯವನಸೇನೆ ವಡಬನಂತೆ ನುಗ್ಗಿತು;
ನಮ್ಮ ದೇವ! ನಮ್ಮ ರಾಯ!
ನಮ್ಮ ರಾಮರಾಯ! ಎಂದು
ನಮ್ಮ ನಗರ ತೆರೆಯ ತೆರದಿ ಮೊರೆದು ಚೆಲ್ಲಿ ಕೆಡೆಯಿತು.

ಸಿಡಿಲು ಮುಗಿಲ ರೆಕ್ಕೆಗಳನು
ಬಡಿದು ಮಿಂಚುಗುತ್ತುವಂತೆ
ಹಲಗೆವಿಡಿದ ತುರುಕದಳವು 'ಕಡಿತಲೆ'ಯುಲಿ ಕುತ್ತಿತ್ತು;
ಕೆದರುದಲೆಯು ಬೆದರುಬಾಯು
ಬಡಿವ ಕೈಯು ಬೀಳ್ವ ಮೆಯ್ಯು
ಒಡವುಗಳನು ಪಂತವಾಡಿ ತರಿದು ತರಿದು ಸೊಕ್ಕಿತು.

ನಗರಸಿರಿಯು ಸುಲಿವ ಖೂಳ-
ತೆಗೆ ನೃಸಿಂಹಮೂರ್ತಿ ಕನಲಿ
ಕುದಿದು ತನ್ನ ಶಿಲೆತನಕ್ಕೆ ಬಲಿದು ಹಲ್ಲ ಮೊರೆಯುಲು
ಜಗುಳೆ ಕೋರೆ, ಮುಖ ಕರಾಲ-
ತರ ವಿಕಾರಗೊಳ್ಳಲದರ
ಬಳಿಗೆ ಬರ್ಬರೌಘ ಬಂದು ಬಗುಳಿ ಹಲ್ಲ ಕಿರಿಯಿತು!

ಜಗದ ಕಣ್ಣ ಕುಟ್ಟುವಂತೆ,
ಪಳಿಕುನೆಲದ ಹೊನ್ನ ಹೊದೆದ
ಚೆಲುವ ಮಂಟಪಗಳ ಘನ ಫಿರಂಗಿಗಳಲಿ ಸುಟ್ಟರು;
ಜಗಕೆ ವಿಷವನೆರೆಯುವಂತೆ,
ಹಸುಳೆಹೆಂಗಳೊಡಲ ತರಿದು
ಬಸಿವ ನೆತ್ತರೋಕುಳಿಯುನು ನದಿಗೆ ಹರಿಯಬಿಟ್ಟರು!

ಹಗೆಗಳಿಂತು ನಗರದಲ್ಲಿ
ಧಗಧಗಿಸುತ ರೌರವವನು
ನಗಿಸಿ ಯಮನ ಬಾವುಟವನು ನಟ್ಟು, ನಲಿದು ತಣಿದರು;
ಮೊದಲವೇನೊ! ವಿಧಿಯ ರಥಕೆ
ಹೂಡಲಾಗಿ, 'ಹುಲಿಗಳಾಗಿ
ಬಗಿದು ತಿಂದೆವೆ'ನುತ ಬಾಯ ಚಪ್ಪರಿಸುತ ಕುಣಿದರು!

೧೯೩೭

# ಯುಗಪುರುಷ ಬರುವನೇ ?

ನಡುಗುತಿದೆ ನಡುಗುತಿದೆ ಸಕಲಪ್ರಪಂಚದೆದೆ.
ಬಿಡುವನೇ ಹಣೆಗಣ್ಣನಿನ್ನೊಮ್ಮೆ ರಣರುದ್ರ?
ಅರೆದೆರೆಯಲಾರನವನಿನ್ನು; ತೆರೆದರೆ ಹಣೆಯೆ
ಬಿರಿದಂತೆ ಬಿಚ್ಚದಿರನಯ್ಯೊ! ರಣವಿಜ್ಞಾನಿ—
ಅಣುಬಾಂಬು, ರೋಗಾಣುಬಾಂಬು, ಜಲಜನಿಬಾಂಬು,
ಕಿರಣದಾರುಣ—ಅದಿನ್ನೇನೇನ ಕಂಡಿಹನೊ!

ನೆಲನೊಡೆದು ಮೇಲೆದ್ದ ವಡಬಶಲಭಗಳಂತೆ,
ಮರಣವರ್ಷಣ ಮೇಘಘಟೆಯುಂತೆ, ತ್ರಿಪುರಗಳೆ
ಹಲವು ಸಾವಿರ ಸಂಖ್ಯೆಯಾದಂತೆ, ಬಾನಿಂದ
ರಣಯಾನಯಾನ ಭೋರ್ರೈಸಿ ಘೋರ್ರೈಸುತಿರೆ
ನೆಲವೆಲ್ಲ ಕಡಲೆಲ್ಲ ಚಿತೆಯಾಗದೇ?

ನಗರಾಗ್ರ ಸೌಧಗಳು ಗಗನಾಗ್ರಚುಂಬಿಗಳು,
ಘನಸೇತುಬಂಧಗಳು, ಜಲಮಹಾಬಂಧಗಳು,
ಕವಿಮನೋಮುಕುರಗಳು ವಾಸ್ತುಕೃತಿರತ್ನಗಳು,
ತುಮುರುತುಮುರಾಗಿ ಹುಡಿಹುಡಿಯಾಗಿ ಹೊಗೆಯಾಗೆ;

ಜನಪದಾರಾಮಗಳು ಧಗಧಗಿಸಿ ಹೊತ್ತುತಿರೆ,
ಹಸುರು ಹೊಲ ಬಯಲುಗಳು ಮಸಣಿಸುತ್ತಿರೆ, ಮುಗ್ಧ
ಸುರಭಿಗಳು ವತ್ಸಗಳು ಕಲಕಂಠಕೀರಗಳು
ಹುಡಹುಡನೆ ಹೊರಳಿ ಕರೆಕರೆದು ಮೆಯ್ಸುರೆಯುತಿರೆ;

ಮಗು ತಾಯ ಕರೆಯುತ್ತ, ತಾಯ್ ಮಗುವನರಸುತ್ತ,
ಮುದುಕ ಬಾಯ್ಗಗಿಣ್ ಬಿಟ್ಟು, ಹಸುಳೆ ಕಣ್ ಬಾಯ್ ಸುಟ್ಟು,
ಪತಿ ಪತ್ನಿ ನೆನೆನೆನೆದು, ವಧು ವರನು ಕುದಿಕುದಿದು—
ಜಗದ ಮಾನವಕೋಟಿ, ಕೂಗಾಡಿ ಚೀರಾಡಿ
ಮರುಳಿದ್ದು ಹರಿದೋಡಿ ಕೆಡೆಬಿದ್ದು ಹೊರಳಾಡಿ
ನರಳಾಡಿ ಬಾಯಾರಿ ಕೈಕಾಲ ಬಡಿದಾಡಿ
ಬೆದಬೆಂದು ಮಿಡಿಮಿಡಿದು ಕರಿಕರಿಕದೇ?

ಲಯದುಲ್ಕೆ ಸಿಡಿಸಿಡಿದು ಜಡಿಜಡಿಯ ಭೂಪೃಷ್ಠ
ಬಿರಿಬಿರಿಯದೇ? ಸಂಧಿ ಸಡಿಲಾಗಿ ಶೈಲಗಳು
ಹೊಡೆಮೊಗಚವೇ? ಕುಣಿವ ಕಿಚ್ಚಿನಲಿ ನೀರೆಲ್ಲ
ಉರಿವಾರಿ, ನಿರ್ಜನದಿ ಶೋಕವೊಂದೇ ಹೊಳೆಯೆ
ಹರಿಯುತಿರದೇ?—ಬೆಳಕ ಕತ್ತಲೆಯ ನಗದೇ?

ನಡನಡುಗಿ ನುಡಿಯುತಿದೆ ಸಕಲಪ್ರಪಂಚದೆದೆ—
ಬಿಡುವನೇ ಹಣೆಗಣ್ಣನಿನ್ನೊಮ್ಮೆ ರಣರುದ್ರ?
ತಡೆವರಿಲ್ಲವೆ?–ಎಂದು, ಕಣ್ಬಿಟ್ಟು ಕಿವಿಯಿತ್ತು
ಕೊರಳೆತ್ತಿ, ನೋಡುತಿದೆ ಕೇಳುತಿದೆ, ಕೇಳುತಿದೆ—
ಯುಗಪುರುಷ ಬರುವನೇ? ಶಿವೆಯು ಕರೆತರುವನೇ?
ಯುಗಪುರುಷ ಬರುವನೇ? ಶಿವೆಯು ಕರೆತರುವನೇ?

೧೯೬೦

# ಏಕಾಂತ

ಕಳೆದ ಕರ್ಮಗಳು, ಸುಖದುಃಖಂಗಳದ್ಯತನ
ರತಿವಿರತಿಗಳು, ಬರುವ ಭಾಗ್ಯಫಲವೃಕ್ಷಗಳ-
ನಡರುವೆಣಿಕೆಗಳೆಲ್ಲ,—ಹಗಲ ಹೋರಾಟದಲಿ
ದಣಿದಿನಿತು ವಿಶ್ರಾಂತಿಯನು ಪಡೆಯಲೆಂದು ನಿ-
ರ್ಜನ ದೇಶವನು ಹುಡುಕಿ ಬಳಿಸಾರೆ,—ಬಂದೆನ್ನ
ಬಲಹೀನ ತನುಮನವ ಮುತ್ತಿ ಹೋರಾಡುವುವು !
ಜಗದೊಳೇಕಾಂತವೆಂಬುದದೊಂದು ಬರಿ ಹೆಸರೆ ?
ಗಹನ ಮರುಭೂಮಿಯಲಿ ಕುಣಿವ ಮೃಗಜಲದೊಸರೆ ?

ಅಧಿಕಾರಪರ್ವತವನಡರಿ ಬಳಲಿದರಂತೆ,
ಬಹುಶಾಸ್ತ್ರಸಾಗರವ ದಾಂಟಿ ತೊಳಲಿದಂತೆ,
ಸುಖದ ಖನಿಗಳ ಸೂರೆಗೊಂಡು ಮರಳಿದಂತೆ ;-
ಕಡೆಯೊಳವರೇಕಾಂತದಲಿ ಕಂಡು ಶಾಂತಿಯನು,
'ಜಗವೆ ! ಜೀವನದ ಹೋರಾಟದಲಿ ಕೊರಗದಿರು,
ತಣಿವುದೇಕಾಂತದೊಳಗೆ'ಂದು ಸಾರಿದರಂತೆ.
ಜನತೆಯೊಡನಾಟದಲಿ ನಿಮಿಷವೂ ಸುಖವಿಲ್ಲ ;
ವಿಜನತೆಯನೇಕಾಂತವೆಂದರದು ನಿಜವಲ್ಲ.

ಮಾಯಾಭಿನಯಗಳಿಂ ಬಹುಭಂಗಿಗೆಡೆಯಾದ
ಲೋಕದಾಟವ ಸೃಜಿಸಿದವನ ಮೋರೆಯನರಿಯೇ !
ಆವಾದ ಕಡೆಗೆ ಬಯಕೆಗಳನಾರೆಳೆಯುವನೊ
ಆ ರಂಗನಾಯಕನ ಸೂತ್ರದೊಲವನು ತಿಳಿಯೆ !
'ಏಕಾಂತ ! ಏ ಕಾಂತ !' ಎಂದಾರ್ತಿಯಲಿ ಕರೆದೆ,
ಶಾಂತಿ ಹನಿಹನಿಯಾಗಿ ತನಿದಂಪನೀಯುತಿದೆ !
ಏಕಾಂತವೆನಲೊಂಟಿತನವಲ್ಲ ; ಮನದ ಹರಿ-
.ವೇಕಾಂತವಹುದೆ ನಿಜದೇಕಾಂತವದೆ ಶಾಂತ.

೧೯೩೪

# ಏನಿದು ಚಿತ್ರ !

ಅನಾದಿಯಿಂದ ಮೊದಲ್ಗೊಂಡು ಇದೀ ವರೆಗೆ ಹುಟ್ಟಿಬಂದ
ಜೀವಿಗಳಲಿ ಒಂದರಂತೆ ಇನ್ನೊಂದಿಲ್ಲ !
ಒಂದು ಎರಡು ಮೊದಲುಗೊಂಡು ಪರಾರ್ಧವನು ಮೀರಿಕೊಂಡು
ಎಣಿಕೆಗೊಳುವ ಸಂಖ್ಯೆಗಳಿಗೆ ಕೊನೆಯೇ ಇಲ್ಲ.

ಭೂಮಿಯಾಚೆ ಚಂದ್ರಗೋಲ, ಚಂದ್ರನಾಚೆ ಸೂರ್ಯಗೋಲ,
ಸೂರ್ಯನಾಚೆ ಮಹಾ ಮಹಾ ಗೋಲ ವಿಶಾಲ ;
ಅದರ ಮೇಲೆ ಮತ್ತೆ ಮತ್ತೆ ಮೇಲೆ ಮೇಲೆ ಗೋಲ ಗೋಲ,
ಬಳಿಕ ಗೋಲ, ಬಳಿಕ ಗೋಲ ! ಎಲ್ಲಿದೆ ಕೂಲ ?

ಎರಡು ಕನ್ನಡಿಗಳ ಮೋರೆ ಇದಿರಿದಿರಾಗಿರಲು, ಪಡೆವ
ತೆರುವ ಬಿಂಬ ಪಡಿಬಿಂಬಕೆ ಕಡೆಯೊಂದಿಲ್ಲ.
ಗಂಡಿಗೆ ಮೊದಲೊಂದು ಹೆಣ್ಣು, ಹೆಣ್ಣಿಗೆ ಮೊದಲೊಂದು ಗಂಡು
ಗಿಡದಿ ಬೀಜ, ಬೀಜದಿ ಗಿಡ ; ಯಾವುದೊ ಮೂಲ ?

ಬೆಳಕು ಕತ್ತಲೆಗಳ ನುಂಗಿ, ಕತ್ತಲೆ ಬೆಳಕುಗಳ ನುಂಗಿ
ಯುಗಯುಗ ಕಳೆಕಳೆಯುತ್ತಿದೆ ; ಗೆಲವೆಂದೆತ್ತ ?
ನೀರಾಸರ ತಣಿಸಿ ತಣಿಸಿ, ಆಸರು ನೀರೆಣಿಸಿ ಎಣಿಸಿ,
ತೀರದು, ತಣಿಯದು, ದಣಿಯದು ; ಏನಿದು ಚಿತ್ರ !

೧೯೬೨

# ಪ್ರಶ್ನೋತ್ತರ

ಈಶ್ವರನಿರುವನೋ ಇಲ್ಲವೊ ಎಂಬುದು
ಗೊತ್ತಾಗುವುದಿಲ್ಲ !
ಈಶ್ವರಸಂಕಲ್ಪವೆಂಬುದೊಂದಿದೆ
ಗೊತ್ತಾಗುವುದಿಲ್ಲ ?
ಮೋಕ್ಷವೊ ಸ್ವರ್ಗವೊ ಇದೆಯೋ ಎಂಬುದು
ಗೊತ್ತಾಗುವುದಿಲ್ಲ !
ಭಕ್ತಿಶ್ರದ್ಧೆಯ ಫಲ ಬಲವೆಂಬುದು
ಗೊತ್ತಾಗುವುದಿಲ್ಲ ?
ಈಶ್ವರನಿರುವನೋ ?—ಗೊತ್ತಿಲ್ಲ !
ನಶ್ವರ ಜಗವಿದು—ಗೊತ್ತಿಲ್ಲಾ !
ಈಶ್ವರನಿಷ್ಠೆಯೇ ಭಯಹರವೆಂಬುದು
ದಿನದಿನಕನುಭವವಹುದಲ್ಲಾ ?
ಈಶ್ವರಭಕ್ತಿಯೇ ನಿಜಸುಖವೆಂಬುದು
ಭಕ್ತರ ಹೊಣೆ ಪರಮೇಶನದೆಂಬುದು
ಭಕ್ತಿಯನುಭವಕೆ ಬಹುದಲ್ಲಾ ?
ಹಾಗಾದರೆ, ಶಿವನಿರುವನಿರುವನಿದ
ನಂಬು ನಂಬು ಸಂಶಯ ಸಲ್ಲ !

೧೯೬೨

# ತಾರೆಯಂತೆ ನಗುತ್ತಿದ್ದೆ

ಹೂವರಳಿದೆ ಊರ ಸುತ್ತ
ಮುತ್ತುತಿದೆ ಸುಗಂಧ ಮತ್ತ
ಓಡಿಯೋಡಿ ನೋಡಿ ಸೂಡಿ ಹಾಡಬೇಕೆನುತಿದೆ ಚಿತ್ತ.
ಓ ! ಕಾಲಿಗೆ ಬಲವಿಲ್ಲ,
ರೆಕ್ಕೆಯು ಶಿವ ಕೊಡಲಿಲ್ಲ !
ಕೊಟ್ಟಿದ್ದರೆ,—ಚಿಟ್ಟೆಯಾಗಿ ತಟ್ಟನೆ ಮೇಲೇರುತಿದ್ದೆ
ಬೆಟ್ಟಗಳನು ಹಾರಿ ನೆಗೆದು ಹೂವಿಗೆ ಹೂವಾಗುತ್ತಿದ್ದೆ !
- ಹೂವಿನ ಹೊರೆ ಮುಡಿಯುತ್ತಿದ್ದೆ
ಮದುಮಗಳಾಗುತ್ತಿದ್ದೆ !
ಮಧುಮಾಲೆಯು ತರುತಿದ್ದೆ
ವಿಧುವನು ವರನೆನುತಿದ್ದೆ
ಸೊದೆಗುಡಿದಂತಿರುತಿದ್ದೆ
ತಾರೆಯಂತೆ ನಗುತಿದ್ದೆ !

೧೯೫೭

# ನೌಕೆಯಲೆನ್ನ ಕುಳ್ಳಿರಿಸು

ಅಮ್ಮ ! ನಿನ್ನ ವಿಹಾರ-ನೌಕೆಯಲೆನ್ನ ಕುಳ್ಳಿರಿಸು.
ಸಣ್ಣ ಬೆಳಗಿಂದೀಜಿ ಈಜಿ, ಬೆನ್ನುಹುರಿ ಕೈಕಾಲು ಕುಸಿಯಿತು
ಅಮ್ಮ ! ನಿನ್ನ ವಿಹಾರ-ನೌಕೆಯಲೆನ್ನ ಕುಳ್ಳಿರಿಸು.

ಹೊತ್ತು ನೆತ್ತಿಯ ದಾಟಿ ಕೆಳಗೆ, ಕೆಳಗೆ ಹೋಗುತಿದೆ-ಸುತ್ತಲು
ಎತ್ತಲೂ ಮೊದಲಿದ್ದ ಶುಭ್ರತೆ ಕಾಣದಾಗುತಿದೆ-ತಲೆಯನು
ಎತ್ತಿ ಹಿಡಿದು, ಹಿಡಿದು ಬಳಲಿದ ಕೊರಳು ಸೋಲುತಿದೆ-ಉಸಿರನು
ಎತ್ತಿ ಮೊಗೆದು, ಮೊಗೆದು ಚೆಲ್ಲುತ ತೆಗಲೆ ಬತ್ತುತಿದೆ-ಅಮ್ಮಾ !
ನನಸು ಕನಸುತಿದೆ-ಆದರು
ಮನಸು ನೆಗೆಯುತಿದೆ-ನೀರಿನ
ಚೆಲುವನೆಣಿಸುತಿದೆ–ಬಾಬಾ
ಅಮ್ಮ ನಿನ್ನ ವಿಹಾರ-ನೌಕೆಯಲ್ಲೊಮ್ಮೆ ಕುಳ್ಳಿರಿಸು.

ರೂರದಿಂ ಭೋರೆನುವ ಗಾಳಿಯ ದಾಳಿ ಕೇಳುತಿದೆ-ತೆರೆತೆರೆ
ಮೀರಿ ನೊರೆಗಳ ಹಲ್ಲ ಕಿಸಿಯುತ ಮೇಲೆ ಹಾರುತಿದೆ-ಕತ್ತಲೆ
ಕಾಳಿಯಾಗುತ ಮಿಂಚ ಮಸೆಯುವ ಕನಸು ಕಟ್ಟುತಿದೆ-ಕಾಣದ
ನೀಳದಾಳದ ನೀರು ಮಯ್ಯನು ಕೆಳಗೆ ಸೆಳೆಯುತಿದೆ-ಅಮ್ಮಾ !
ಮನಸು ನಡುಗುತಿದೆ-ಆದರು
ಚೆಲುವ ಹುಡುಕುತಿದೆ-ಓವೋ
ಸಮಯ ಮೀರುತಿದೆ-ತಾತಾ
ಅಮ್ಮ ನಿನ್ನ ವಿಹಾರ-ನೌಕೆಯನೆನ್ನ ಬಳಿಗಿರಿಸು.

ಸೂರ್ಯ ಸಂಜೆಯ ಕೂಡಿ ಓಕುಳಿಯಾಡುತಿರುವಾಗ-ಬಾನಲಿ
ಏಳು ಬಣ್ಣದ ತೋರಣವು ಮೇಲೇರುತಿರುವಾಗ-ನೋಡಲು
ತಾರಕೆಗಳೋಡೋಡಿ ಬರುತಿರೆ ಚಂದ್ರ ನಗುವಾಗ-ಕಾಣುತ
ಭೂರಿದೃಶ್ಯವ ನಲಿದು ನಲಿದಾಂ ಪಾಡುತಿರುವಾಗ-ಸಂತಸ
ವೇರಿ ತಲೆ ಭಾರಯಿಸಿ ಕಣ್ಗಳು ತೂಗುತಿರುವಾಗ-ಮಗನೇ
ಬಾರೆನುತ ಮಡಿಲಲ್ಲಿ ಮಲಗಿಸಿ ಹಾಯಿಯಗಲಿಸಿ ದಡಕೆ ನಡೆಯಿಸು !
ಅಮ್ಮ ನಿನ್ನ ವಿಹಾರ-ನೌಕೆಯಲ್ಲೆನ ಕುಳ್ಳಿರಿಸು-ಅಮ್ಮಾ !
ನಿನ್ನ ದಯೆಯ ವಿಲಾಸ-ನೌಕೆಯಲೆನ್ನ ಕುಳ್ಳಿರಿಸು-ಕೈ ನೀ-
ಡಮ್ಮ ಕೈಕೊಳ್ಳಮ್ಮ ಮೇಲೆತ್ತಮ್ಮ ಕುಳ್ಳಿರಿಸು !

೧೯೫೯

# ಎಣ್ಣೆ ಹೊಯ್ಯಮ್ಮ ದೀಪಕ್ಕೆ

ಎಣ್ಣೆ ಹೊಯ್ಯಮ್ಮ ದೀಪಕ್ಕೆ !
ಬತ್ತಿಯೊಣಗುತಿದೆ ಬೆಳಕು ಬಾಡುತ್ತಿದೆ
ಕತ್ತಲೆ ಮುಂದೆ ಮುಂದೊತ್ತುತ್ತಿದೆ
ಅತ್ತಲಿಂದಿತ್ತಲು ಕಂಡಿಯೊಳಗೆ ನುಗ್ಗಿ
ಒತ್ತರದಲಿ ಗಾಳಿ ಬೀಸುತ್ತಿದೆ.
—ಎಣ್ಣೆ ಹೊಯ್ಯಮ್ಮ ದೀಪಕ್ಕೆ !

ಹೊರಗಲ್ಲಿ ಗಿಡಮರಗಳ ಕೊಂಬೆರೆಂಬೆಗಳ್
ಬಡಿದಾಡಿಕೊಂಡು ಭೋರಿಡುತಲಿವೆ.
ಪಡುಬಾನ ಕರ್ಮುಗಿಲ್ ಅರಿಲೊಂದೊಂದನೆ ಮೆಟ್ಟಿ
ಕುಡಿಮಿಂಚಿನಲಿ ಗಹಗಹಿಸುತಿದೆ.
—ಎಣ್ಣೆ ಹೊಯ್ಯಮ್ಮ ದೀಪಕ್ಕೆ !

ಹಸಿದ ಮಕ್ಕಳು ಬಟ್ಟಲೆನ್ನದು ತನ್ನದೆಂ-
ದೆಳೆದಾಡಿಕೊಂಡು ಗುದ್ದಾಡುತ್ತಿವೆ
ಹಿರಿಯರ ಸಂಧ್ಯಾವಂದನೆಯು ಸಾಹಿತ್ಯವ
ಕಡೆಗಾಲೊಳೆಡವಿ ಚೆಲ್ಲಾಡುತ್ತಿವೆ.
—ಎಣ್ಣೆ ಹೊಯ್ಯಮ್ಮ ದೀಪಕ್ಕೆ !

ಗೋಡೆಯ ಬಳಿಯಿಂದ ಹಸರುಗಣ್ಣಿನ ಭೂತ
ಹಾಲಳಗೆಯ ಬಳಿ ಸಾರುತಿದೆ
ಗೂಡಿನ ಗಿಳಿ ಹೆಸರೆತ್ತಿ ಕರೆದು ಕೀರಿ
ಕಾಣದೆ ನಿನ್ನ ಕಂಗೆಡುತಲಿದೆ !
—ಎಣ್ಣೆ ಹೊಯ್ಯಮ್ಮ ದೀಪಕ್ಕೆ !

೧೯೬೦

## ಇಷ್ಟು ಬೇಕು - ಇಷ್ಟು ಸಾಕು

ನಿನ್ನ ನಾಮದಲಿ ನಿನ್ನನು ಕಾಣುವ
ಚಿಣ್ಣಮನಸು ಬೇಕೆನಗೆ ಹರಿ !
ಎನ್ನವರನು ಭಗವನ್ ನಿನ್ನೊಲ್ಮೆಯ
ಕಣ್ಣು ನೋಡುತಿರಬೇಕು ಹರಿ !
ಕನ್ನಡ ನುಡಿಯಲಿ ಕಂಡು ನುಡಿಯುವ
ಪುಣ್ಯವಿರಲು ಸಾಕೆನಗೆ ಹರಿ !
ಜನ್ಮಜನ್ಮದಲಿ ಭಾರತಭೂಮಿಯ
ಮಣ್ಣೆ ನೀರೆ ಸಾಕೆನಗೆ ಹರಿ !

೧೯೬೪

# ಓವೋ ಮುದ್ದಣ !

ಕರೆನಾಡಿನ ಕನ್ನಡಕುವರರ ಕೊಂಡಾಟದ ಬೊಂಬೆಯೆ
ತುಳುಮಲ್ಲಿಗೆಬಳ್ಳಿಯೊಳರಳಿದ ಕನ್ನಡದರಳೇ
ಸರಸದ ಕದಿರೇ ಕವಿರತ್ನಗಳಲಿ ಮುತ್ತಿನ ಹರಳೇ
ತಲೆಬಾಗುವೆ ನಿನಗಣ್ಣಾ, ಹೊಸಗನ್ನಡದಣ್ಣಾ !

ಗದುಗಿನ ನಾರಾಯಣಕವಿ ನುಡಿಯಬ್ಬೆಗೆ ಪದ್ಯರಸಾ–
ಯನವುಣಿಸಿರೆ, ಓವೋ ನಂದಳಿಕೆಯ ನಾರಾಯಣ !
ನರುಗದ್ಯದ ಕಪ್ಪುರದಂಬುಲವನು ನೀ ಮೆಲ್ಲಿಸಿ ಚೆನ್–
ನಗೆಯೊಗೆಯಿಸಿ ಮಕ್ಕಳ ಕೆನ್ನೆಗೆ ಕೆಂಪೊದವಿಸಿದಯ್.

ಕುವರನ ವಿಜಯದಿ ಕುಣಿಕುಣಿಯುತ ಬಿದ್ದೆದ್ದದ್ಭುತ ರಾ-
ಮನ ಕಥೆಯಲಿ ಗುಪಿತದಿ ಗಮಿಸುತಲಭಿಷೇಕದಲಿ
ಪ್ರವಹಿಸಿ, ಮೋಘದಿ ನುಡಿನಾಡಿಗೆ ರಸಕಾರಂಜಿಯ ಚಿ–
ಮ್ಮಿಸುತಿದೆ ಮುದ್ದಣ ನಿನ್ನೀ ಪ್ರತಿಭಾಕಾವೇರಿ.

ಕರೆನಾಡಿನ ಸಿರಿಗನ್ನಡ ನುಡಿಯನು ನುಡಿವರಗಿಳಿಯೇ
ಹಳಗನ್ನಡಗೊಳ ತುಂಬಿದ ಹೊಸಗನ್ನಡದೊಸರೇ
ಉಡುಪಿಯ ಪುಣ್ಯದ ಮುರಲಿಯ ನುಡಿ ಹೊಮ್ಮಿದ ರಸರಂಧ್ರವೆ !
ತಲೆಬಾಗುವ ಕೊಂಡಾಡುವೆ, ಓವೋ ಮುದ್ದಣ್ಣಾ !

೧೯೪೦

## ಸಿಂಹರವಿ

ಘೋರ ರಾತ್ರಿ ಬಂದಿತ್ತು !
ತಮವೇರಿ ಯುಗವೆ ಸಂದಿತ್ತು
ಕಾರುಣ್ಯಕಾಂತಿ ಚಂದಿರ ಮುಳುಗಿತ್ತು
ಭೂಮಿಯಿಂದ ಬಹುದೂರ ದೂರ ಅತಿ
ದೂರ ತಾರೆ ಅಲ್ಲಲ್ಲೊಂದಿತ್ತು,
—ಘೋರ ರಾತ್ರಿ ಬಂದಿತ್ತು.

ಮೃಗಜಾತಿ ನಾಡ ನುಗ್ಗಿತ್ತು
ನರಜಾತಿ ಕಾಡಿಗೊಗ್ಗಿತ್ತು,
ಕಡೆಗಣ್ಣ ಹೊಳಪೆ ಖಡುಗಗಳ ಝಳಪೆ
ನಡೆವರಿಗೆ ದೀಪವಾಗಿತ್ತು !
—ಘೋರ ರಾತ್ರಿ ಬಂದಿತ್ತು.

ಜಡಜನತೆ ಚಳಿಗೆ ನಡುಗಿತ್ತು
ಮಡಿಮಡಿಕ ಮುಸುಕಿನೊಳಗಡಗಿತ್ತು
ಪಡುಬಾನ ಮಿಂಚು ಬಡಿದತ್ತು !
ಮನೆಮಠದ ಮಾಡು ಮಗುಚಿತ್ತು
ಹೌಹಾರಿ ಕಣ್ಣು ತೆರೆದತ್ತು;
ಘೋರಾಂಧಕಾರವಾಗಿತ್ತು !

ಬಟ್ಟೆಯಿಲ್ಲ ನೆಲೆಯಿಲ್ಲ ಕಣ್ಣುಗಳ
ಕೊಟ್ಟ ವಿಧಿಯೆ ಕುರುಡಾಗಿಸಿತಲ್ಲಾ !
ಸೃಷ್ಟಿಕರ್ತ ನೀನುಂಟೋ ? ಇಲ್ಲಾ ?
ಕಷ್ಟವಿದಕೆ ಕೊನೆಯುಂಟೋ ? ಇಲ್ಲಾ ?
ಎಂದು ಮಂದಿ ರೋರೋದಿಸಿತು
ಭಾರತಮಾನಸ ಮಂಥಿಸಿತು
ಭೂಸಾಗರವು ತರಂಗಿಸಿತು !

ಏನು ಸೋಜಿಗವೊ. ಪೂರ್ವದಿಗಂತದಿ ತೋರಿತು ಕೆಂಬಣ್ಣ !
ಚೈತನ್ಯದಂಡ ಬಿರಿದೆದ್ದ ಹಂಸಶಿಶು ಕಾಣಿಸಿತ್ತು ಕಣ್ಣ.
ನರಗುವರನ ಕಣ್ಬನಿಯಾಯಿತು ನಕ್ಷತ್ರ ಸಪ್ತವರ್ಣ !
ಕಾಷಾಯ ಕೇಸರವ ಕೆದರಿ
ಮೊಗದೋರಿತು ಸಿಂಹರವಿ
ಹಗಲಾಯಿತು ಸಕಲ ಭುವಿ !

೧೯೬೩

# ಜಯ ಭಾರತಪುತ್ರ !

ಓ ಭರತಭೂಮಿವರಪುತ್ರ
ವಂಗವಾಗಲಿ ಕಳಿಂಗವಾಗಲಿ, ತೆಲುಂಗವೋ ಮಹಾರಾಷ್ಟ್ರವೋ,
ಗಾಂಗ ಯಾಮುನ ದ್ರವಿಡ ರೈವ ಕರ್ಣಾಟ ನಾಗ ಸೌರಾಷ್ಟ್ರವೋ,
ತುಂಗಸಾನುವೊಳ್ ದೇವದಾರುಗಳ್ ಪೊಂಗುತಿರ್ಪ ಹಿಮಶೈಲವೋ,
ಸಿಂಧುವೀಚಿಲಯಕೊಲೆವ ಸಿರಿಮುಡಿಯ ತೆಂಗುಗಳ್ ನಿಲ್ವ ತೀರವೋ,
ಇದು ಭರತಭೂಮಿ ಸರ್ವತ್ರ.
ಓ ಪುಣ್ಯಭೂಮಿ ವರಪುತ್ರ
ನೀ ಸಕಲ ಭಾಗ್ಯ ಸತ್ಪಾತ್ರ.

ಓ ಭರತಭೂಮಿವರಪುತ್ರ
ಮಳೆಯ ಬಿಲ್ಲಿನಲಿ ಹಲವು ಬಣ್ಣಗಳು ನೆರದಿಹಂತೆ, ಶ್ರೀಭಾರತಿ
ಭಾರತೀಯ ಭಾಷೆಗಳ ಕಾಂತಿಯಲಿ ತೋರುತಿಹಳು ನಿಜಮೂರುತಿ.
ಕಾಮಧೇನುವಿನ ಕೆಚ್ಚಲೆಲ್ಲ ನಿನಗಾಗಿರಲ್ಕೆ ಮೊಲೆಯೊಂದನೇ
ಬಾಯೊಳಿಟ್ಟು ತಣಿಯುವುದೆ ? ನಾಲ್ಮೊಲೆಯ ಹಾಲನುಂಡು ಕುಣಿ ಕಂದನೇ!
ಈ ಸಕಲಭಾಷೆ ಸುಪವಿತ್ರ
ಓ ಭರತಭೂಮಿವರಪುತ್ರ
ನೀ ಮಹಾಭಾಗ್ಯ ಸತ್ಪಾತ್ರ.

ಓ ಭರತಭೂಮಿವರಪುತ್ರ
ವ್ಯಾಸನೊ ವಾಲ್ಮೀಕಿಯೊ ಬಡಗಣವರು ಶಂಕರ ತೆಂಕಣನಾಗಿರಲ್
ಪಾಣಿನಿ ಪಶ್ಚಿಮದವನು ರವೀಂದ್ರನು ಪೂರ್ವಭಾಗದವನಾಗಿರಲ್
ಕಾಳಿದಾಸನುಜ್ಜಯಿನಿಯವನು ಮದ್ರಾಸಿ ವಳ್ಳುವರನಾಗಿರಲ್
ಭೇದವೇ ಬೃಹದ್ಭಾರತಬೋಧಿಯ ಬೇರೆ ಬೇರೆ ಕೊಂಬೆಗಳಲಿ ?
ಆ ಸಿದ್ಧಿ ನಿನ್ನ ಗಾತ್ರ
ಓ ಭರತಭೂಮಿವರಪುತ್ರ
ನೀ ಪೂರ್ಣಪುಣ್ಯಪಾತ್ರ.

ಓ ಭರತಭೂಮಿವರಪುತ್ರ
ಆದಿಯ ಮಾನವರೀ ಧಾತ್ರಿಯಲ್ಲಿ ಮಾನವಧಾತ್ರಿಯ ಕಂಡಿರೆ,
ಆರ್ಯರಾರೊ ಅಲ್ಲದವರಾರೊ ಒಡಗೂಡಿ ಒಂದೆ ಹಾಲುಂಡಿರೆ ?
ತಾಮ್ರ ತವರಗಳು ಕರಗಿ ಕೂಡಿ ಘನಘಂಟೆಯಾಗಿ ಘಾಣಿಸುತಿರೆ
ತಾಮ್ರವೆಲ್ಲಿ ತಾಂ ತವರವೆಲ್ಲಿ ? ಬರಿಗನಸುಗಾವರವ ಮಾಣು ! ರೇ
ಭರತಭೂಮಿವರಪುತ್ರ
ನೀ ಮಾನುಷ್ಯಕುಲಸುಪುತ್ರ
ನೀನಖಿಲ ಜಗನ್ಮಿತ್ರ.

ಓ ಭರತಭೂಮಿವರಪುತ್ರ
ಪರರ ಕಣ್ಣ ಕನ್ನಡಕದಲ್ಲಿ ಜಗದಿರವ ನೋಡುವುದ ತೊರೆ
ಶ್ರೀಹೃದಯಶಾರದೆಯ ಭಜಿಸಿ ಪಡೆದವಳ ಕರದ ಪುಸ್ತಕವ ತೆರೆ
ಭವಸಮುದ್ರದೊಳ್ ದುಮುಕಿ ತಂದು ನವರತ್ನವರ್ಷಗಳ ಕರೆ
ಜಗದ ಭಯದ ಶಲ್ಯಗಳ ತುಡುಕಿ ಹಿಡಿದೆಳೆ, ದೀಪ್ತಿಯಲಿ ಬೆಳೆ !
ಓ ಸತ್ಯವೀರಪುತ್ರ
ಮಾನುಷ್ಯಪಥದ ನೇತ್ರ
ಓ ಪುಣ್ಯಭೂಮಿವರಪುತ್ರ
ನೀ ಭಾವಿಯುಗದ ಧಾತ್ರ !
ಜಯ ಭಾರತಪುತ್ರ !

೧೯೩೧

# ತರುಣ ಧಮನಿ

ಎಂಬ

ಕಾವ್ಯಖಂಡ

೧

ನುಡಿಯ ದೇವಿ ! ನಿನ್ನ ಕಣ್ಣ ಕೊನೆಯ ನೋಟದೆಳೆಯ ಪಡೆದು
ಮೊದಲ ವರಕವೀಂದ್ರ ತನ್ನ ನುಡಿಯ ಮಾಣಿಕಂಗಳ
ಕೊರಳ ಹಾರವೊಪ್ಪಿಸಿದನು ! ನವಕವೀಂದ್ರ ತನ್ನ ಕಣ್ಣ
ಹನಿಯ ಮಣಿಯ ನೂಪುರಗಳ ನಿನ್ನ ಪದಕೆ ತೊಡಿಸಿದ !

೨

ನುಡಿಗೆ ಹೊಳೆತವೆಲ್ಲಿಯೆನ್ನ ಬಗೆಗೆ ಭಾವದೀಪ್ತಿಯೆಲ್ಲಿ ?
ಬದುಕು ನಿನ್ನದಾಗಿರಲ್ಕೆ ತೆರಿಗೆಗೇನ ಮಾಡಲಿ !
ಎದೆಯ ರಕ್ತಬಿಂದುಗಳನು ಹನಿಸಿ ಹೆಕ್ಕಿಕೊಡುವೆ, ಮನಕೆ
ಬರಲವೊಂದು ಗಳಿಗೆ ನಿನ್ನ ಚೆನ್ನೆಮಣೆಯೊಳಾಡಲಿ !

೩

ಆಡಗುವ ರಾತ್ರಿಯನೆಬ್ಬಟ್ಟುತ ಮೂ–
ಡಲ ಕೆಂಪೇರುತಿರೆ,
ಹುಲಿಬೇಟೆಗೆ ಹಯವೇರಿದ ವಿದ್ಯಾ–
ನಗರದ ರಾಮು–ದೊರೆ.

೪

ಹೆಗಲೇರಿರೆ ಹೆದೆಯೇರಿದ ಬಿಲ್ಲೊನೆ
ಮಿಡುಕಿನ ಕುಡಿಯಂತೆ ;
ನಡುವಿನೊಳೊಲೆದುದು ನಿಡುಗೂರಸಿ ತಾ–
ರುಣ್ಯದ ಮನದಂತೆ.

೫

ಹಣೆಯಗಲವ ಕೋರೈಸುತ ಬಲಿದುದು
ಸಿರಿಮುಡಿ ಜರಿ ಮಿರುಗೆ,
ತರುಣಮನೋರಥವೀಥಿಯ ಸುಂದರ–
ಸೌಧದ ನೆಲೆಯಂತೆ.

೬

ನೀಳ್ದಿವೆನೆಳಲಲಿ ಮಲೆಗಣ್ ನೀಡಿತು
ವಿಭವದ ಮದದಂತೆ.
ಆಳ್ದ ಮೊಗವ ಮೂಗೊಪ್ಪಿತು ಬಾಗುತ
ಕಲಿತ ವಿನಯದಂತೆ.

೭

ಹೊಳೆವಭಿಮಾನದಿ ತುಂಬಿದ ಗಂಡದಿ
ಗರುವದ ಚಿಗುರಂತೆ
ಕೊನೆಯೇರಿದ ಬಾಯ್ ; ಬಲಿದ ಚುಬುಕವನು–
ರಾಗದ ಮೊದಲಂತೆ.

 

೮

ಮೊಗಕುಬ್ಬಿದ ಮೆಯ್, ಮೆಯ್ಯುಗ್ಗಿಬ್ಬಿದ ಕೈ
ಕೈಗುಬ್ಬಿದ ಕೈದು ;
ತೊಡೆಗುಬ್ಬಿದ ಹಯ, ಹಯಕುಬ್ಬಿದ ತೊಡೆ ;
ನಡೆಗುಬ್ಬಿತು ವನವೆ.

೯

ಹುಲ್ಲೆಯ ಕಂಡರೆ ಹೊಡೆಯಲು ಬೇಡನೆ ?
ಹುಲ್ಲು ಸಿಡಿಲ ಗುರಿಯೆ ?
ಕೊಲ್ಲಲು ಹಕ್ಕಿಯು, ಮನವದು ಕವಣೆಯ
ಕಲ್ಲೆ ? ನಲವ, ಹೊಲೆಯೆ ?

೧೦

ವನಕೆ ನುಗ್ಗಿದನು, ವನದಳಿದೆಗೊಂ–
ದಲಗು ನುಗ್ಗಿದಂತೆ.
ದೊಣೆಯಿಂದೆಳೆದನು ಬಾಣವ, ಮಿಂಚಿನ
ಮರಿಗಳ ಸೆಳೆದಂತೆ.

೧೧

ವನವರಾಹಗಳ ದಾಡೆಯ ಮುರಿದನು,
ವೃಕಗಳ ನಾಲಗೆಯ
ತರಿದನು, ಕರಡಿಯ ಮುಸುಡನು ಸುರಿದನು ;
ಹುಲಿಯನೆ ಹುಡುಕಿದನು.

೧೨

ಕುಟಿಲಗೆ ಕೌಟಿಲ್ಯದ ಕೊರಳುರುಳನು
ಘಟಿಪುದು ; ಸಟೆಗನಲಿ
ಸಟೆವುದು ; ರಾಮಗೆ ಗೆಲವೆಂಬೊಗಟ ವಿ-
ಘಟಿಸುವ ಸೂತ್ರವಿದು.

೧೩

ಕುಹಕವ ನೆನೆದನು, ಕುದುರೆಯನಿಳಿದನು ;
ಮಿದುಹೆಜ್ಜೆಯ ಹಿಡಿದು,
ಹಸಿಹುಲ್ಲಿಗೆ ಮೆಯ್ನೀಡಿದ ಹುಲ್ಲೆಯು
ಚಳಕದಿ ತುಡುಕಿದನು ;

೧೪

ಕವಿಹಿಡಿದೊಯ್ದನು, ತರುವಿನ ಮೂಲಕೆ
ಬಲಿದನು ; ಮರವೇರಿ
ಕುಳಿತನು, ಸಿಡಿಲಡಗಿದ ಮುಗಿಲಿನ ಮುರಿ-
ಯುಂತಿರೆ ಕೈಕೋವಿ.

೧೫

ಎಣೆಯನು ನೆನೆದೋ, ಮರಿಯನು ಕರೆದೋ,
ಮನುಜನ ಕಲುಮನಕೋ,
ಮರುಗುತ್ತಿದ್ದುದು ಬಿಗಿವಡೆದೆರಳೆಯು
ವನವನೆ ಕೊರೆಕೊರೆದು !

೧೬

ಹರಿಣಿಯು ಮೊರೆ ಹುಲಿರಾಯನ ಹರಣವ
ಸೆರೆಗೊಂಡಿತು ; ಕಿವಿಯ
ಸೆರೆಯುಗಲಿತು, ಮೂಗರಳಿತು ; ಹೊರಟಿತು
ಗುಹೆಯರಳಿತೋ ಎನಲು

೧೭

ಹುಲಿಯ ಹಾರಯಿಸಿ ಮರದಲಿ ಕುಳಿತಾ
ದೊರೆಯು ಕಣ್ಬೊಲದಲಿ
ಸುಳಿದುವು ದೂರದೊಳರಸಂಚೆಗಳೆನೆ
ಮುಸುಕಿನ ರೂಪೆರಡು.

೧೮

ಚಕಿತ-ಚಕಿತ-ಚಂಚಲ-ವಿಲೋಕನದ
ನಳನಳಿಸುವ ಮೆಯ್ಯ
ಅಬಲೆಯರೋ ? ಭಯಸರದಲಿ ಹೊಂಚುತ
ಹೊಳೆಯುವ ಬಾಳೆಗಳೋ ?

೧೮

ಅವರೊಳಗೊಬ್ಬಳು ಬಿಳಿಯೆರಳೆಯ ಮರಿ,
ಹಿರಿಯಳ ತೆಕ್ಕೆಯಲಿ
ಚೆಲುವೇ ಬಳಲಿ ಬಳುಕಿ ಬಂದಂತಿರೆ,
ಧೃತಿ ಬಳಲಿತು ದೊರೆಯ

೨೦

ಬೀರದ ಗೂಡಿನ ಬಂದಿ ಮನೋಭವ-
ರಾಜಕೀರನೆದೆಯು
ಬಾಗಿಲ ಮಿದಿಯಿತು ರೆಕ್ಕೆಯನೆತ್ತಿ, ವಿ-
ಹಾರಿಪ ತವಕದಲಿ,

೨೧

ಮದನರಸದ ನವವರ್ಷಬಿಂದುಗಳು
ಹೃದಯಭೂಮಿಗುದುರೆ,
ನೆಗೆದ ಗಂಧಕರಳಿದುದು ಮೂಗು ನರ-
ವೃಷಭನಿಂದ್ರಿಯಗಳ.

೨೨

ಬೆಣ್ಣೆಯ ಬೊಂಬೆ ನಡೆದು ಬರುವಂತಿರೆ
ಬಿಸಿಲ ಜಳಕೆ ಕರಗಿ,
ತಂಪುಗೊಡುವೆನೆಂದಾಸೆಯ ಕೊಡೆಯನು
ಬಿಚ್ಚಿತು ಮನಸೋಡಿ.

೨೩

ಕಾಮದಿ ಕರಗಿದ ಮನವದು ರಮಣಿಯ
ರೂಪಿನ ಕರುವಿನಲಿ
ಸೋರಲು ತುಂಬಿ, ತದಾಕಾರದಿ ನೆಲೆ-
ವಡೆಯಿತು ತಣಿತಣಿದು.

೨೪

ಅನಿತರೊಳಾ ಹುಲಿ ಕಣ್ಣಿನ ಕೆಂಡದಿ
ಗಹನದಿ ದಾರಿಯನು
ಬಿಡಿಸುತ ಬಂದುದು, ವನದುಸಿರನೆ ಕೊನೆ-
ಬಾಲದಿ ತೂಗುತಲಿ!

೨೫

ಬರುವವರಿಬ್ಬರ ಕಾಣುತ, ಬಣ್ಣದ
ಮೆಯ್ಯನು ಬಾಲದಲಿ
ಬಿಗಿದಮರಿತು ಹೊದರೆಡೆ ಸಿಡಿಲಿಟ್ಟಿತೊ
ಮೊಟ್ಟೆಯನೆಂಬಂತೆ

೨೬

ಮುಗುದೆಯ ಮೆಯ್ಯಲಿ ಮರೆದೊರಗಿದ ಕ-
ಣ್ಣರಿಯಲಿಲ್ಲ ಹುಲಿಯ
ನೆಲೆಯನು, ತನ್ನಯ ಭವಿತವ್ಯತೆಯಲಿ
ಬಲೆಬೀಸಿದ ವಿಧಿಯ.

೨೭

ದಿಕ್ಕುಗೆಟ್ಟವರು ಬರುತಲಿ ಕಂಡರು
ಹೊದರಲಿ ಸಿಡಿಗುಂಡ!
ದಿಟ್ಟಿ ಹಾರೆ ಚೀರುತ ಕಡೆದರು ದೊರೆ-
ಯೇರಿದ ಮರ ನಡುಗೆ.

೨೮

ಘುಡುಘುಡಿಸುತ ನೆಲನೊಡೆದಂತಿರೆ ಧೀಂ-
ಕಿಡುತಾ ಸುಂದರಿಯ
ಎದೆಯುಡರಿತು ಹುಲಿ, ವನಶಾಸನದಂ-
ಡವ, ಬಾಲವ, ನೆಗಹಿ.

೨೯

ಮೀರಿದ ಸಮಯುವನರಿದು ಕಠಾರಿಯ
ಕೀಳುತ, ಮರದಿಂದ
ಹಾರಿ ಹುಲಿಯನೊದೆದಾರ್ದರಿದನು ತಲೆ
ಹಾರೆ ನೆತ್ತರೊಡನೆ.

೩೦

ಮರೆದೊರಗಿದ ಸುಂದರಿಯನು ಹಾರವ
ಎದೆಯಲಿ ದೊರೆಯೆತ್ತಿ,
ಹುಲಿಯುಗುರಿನ ಹಚ್ಚೆಯ, ನಡುಗುವ ಕೊನೆ-
ಬೆರಳಿಂದೆಣಿಸಿದನು.

೩೧

ಗಾಯಗೊಂಡ ಕೋಮಲೆಯನು ಮಡಿಲಲಿ
ಮಲಗಿಸಿ, ನೆತ್ತರಲಿ
ನೋವ ನುಡಿವ ಕುಪ್ಪಸಕಿತ್ತನು ಕ-
ಣ್ಣೀರಲಿ ಮರುನುಡಿಯ.

೩೭

ಆಗಲವಳ ಸಖಿ ಕಣ್ದೆರೆದೆದ್ದಳು.
"ಹಾ ಮಿಹಿರೇ" ಎಂದು
ಬೀಳುವನಿತರೊಳು ದೊರೆ ಮೊಗವೆತ್ತಿ ನಿ-
ವಾರಿಸಿದನು ಭಯವ.

೩೩

"ಬದುಕಿದೆ, ಬದುಕಿದೆ! ಬೆದರದಿರಬಲೇ,
ಅಮರ ಕನ್ಯೆಯಿವಳ
ತುಡುಕೆ ಬಂದ ಮೃತ್ಯುವೆ ಮಡಿಯಿತು ಜಗ-
ದೊಡೆಯನೊಲುಮೆಯಿಂದ."

೩೪

ಎನೆ, ಬೆದರಿಕೆ ಬೆರಗಿನ ಸೆರೆಯಾಗಲು,
ನಿಂದಳು ನೋಡುತ್ತ
ದೊರೆಯ ದಯಾರಸದಲಿ ತೇಲುವ, ಮುಗು-
ಳಿದ ಕಂಗಳ ಸಖಿಯು.

೩೫

ವಿನಯದ ಬಲುಹಿಗೆ ಬಗ್ಗಿದ ದೊರೆ ಸುಂ-
ದರಿಗೆ ಸಖಿಯು ತೊಡೆಯ
ಮೃದುತರ ಶಯ್ಯೆಯನೊದವಿಸೆ, ಪುಲಕದ
ನೆರೆನೊರೆ ನಂದಿದುದದು

೩೬

ಸೆರಗಿನ ಗಾಳಿಗೆ ಚಿಗುರಿನ ಗಾಳಿಯು
ನೆರವಾಯಿತು, ನೀರ
ಹನಿಯುನು ನೇಹದ ಹನಿ ಕೂಡಿತು, ಲಲಿ-
ತಾಂಗಿಯ ಸೇವೆಯಲಿ.

೩೭

"ಯವನಿಯೆ, ನಿಮ್ಮಾ ಮೃದುಪದಕೇತಕೆ
ಗಹನದ ಗತಿಯಾಯ್ತೋ !
ಹರೆಯದ ಬಿಸಿಲಿಗೆ ನೆರಳೀಯುಲು ಭಾ-
ಗ್ಯದ ಮರವಿರದಾಯ್ತೋ ?

೩೮

ಜೀವಕೆ ಬೆಲೆಯಾದೀ ಗೌರಾಂಗಿಯ
ದಾರವಳೋ ! ನಿಮ್ಮ
ನೇಹದ ಮೊರೆಯೆಂತೋ ! ಪರಿಚಯರತಿ
ಜೀವಿಗೆ ಸಹಜವಲಾ ?

೩೯

ರಾಮನ ಮೃದುಗಂಭೀರೋಕ್ತಿಗೆ ತಲೆ-
ಬಾಗಿ ಯವನಿ ತೊಡೆಯ
ಬಾಲೆಯ ಹಣೆಯೊರಸುತ ನುಡಿದಳು ಕ-
ಣ್ಣೀರನುಕಂಪಿಸಲು :—

೪೦

"ಸಿಕ್ಕಿನ ಸಮಯದಿ ಸಿಕ್ಕಿದ ಬಂಧುವೆ,
ಕತ್ತಲೆಯಲಿ ದೊರೆತ
ದಿಕ್ಕೆ! ನಿನ್ನೊಳೊರೆವೆನು ; ಸಂಕೋಚವ
ಮುಕ್ಕದೆ ಸಂಕಟವು ?

೪೧

ನೋಡಿದೊಡವೆ ಕಾಣಿಕೆ, ಕರ್ಣಕೆ ರೂ-
ಪೋಡಿದ ಹೆಣ್ಣರಸಿ,
ಬೀಸಿದ ಬಲಗೈ, ಬಿಚ್ಚುಗತ್ತಿಯಹು-
ದಾಳುವದಿಲಶಹಗೆ.

೪೨

ನೃಪಭಕ್ತಿಯ ಕಾದಿಹ ಸರದಾರರ
ಕೋಟೆಗೆ ಕೊತ್ತಳದ
ತೆರದಾ ಶರಖಾನನ ಸತಿ ಚೆಲುವಿನ
ಸೀಮೆ, ಆಯಶನಾಮೆ.

೪೩

ಕುಲಗೌರವ ಗುಣಸಂಪದವೆದೆಯೊಂ-
ದೆರಕ ಧರ್ಮಬುದ್ಧಿ
ಒಡವೆರೆದಯುಶೆಯ ತೊಲಗಿತೊ, ಹೆತ್ತಳೊ
ಮಗಳನೀ ಮಿಹಿರೆಯ ?

೪೪

ಪ್ರಸವಿಸಿ ಮುತ್ತನು ಶುಕ್ತಿ ಜಘನ್ಯಗೆ
ಸುಲಭವಾಯಿತಯ್ಯೋ !
ಶಹನಳಿಯಾಸೆಯು ಗಾಳಕೆ ಗಂಟಲು
ಸಿಲುಕೆ ಸಂದಳಬಲೆ.

೪೫

'ಹಗೆಯನು ಕೊಯ್ಯಲು ಬದುಕು ಬಿತ್ತೆ'ನುವ
ಬಗೆಯಲಿ ಶರಖಾನ,
ಗೃಹದೀಪಿಕೆಯಿವಳನು ಕೊಂಡೊರನೆ
ತೊರೆದನು, ಧನಿಯೆನ್ನ.

೪೬

ಹಗಲಿರುಳಾದುದು, ಕಾಲವು ಸಂದುದು
ತಲೆಯ ಮರಸಿ ತಿರುಗಿ-
ತಿರುಗಿ ; ವಿಜಯನಗರದ ಸೀಮೆಯೊಳಿರೆ,
ವಿಧಿ ಬಿಟ್ಟುದೆ ಬೆನ್ನ ?

೪೭

ಅರಳಿದ ಸಂಪಗೆಯನು ಕದ್ದೊಯ್ವುದು
ಸದರವೆ ಸಂತೆಯಲಿ ?
ಮಗಳೆರಕವ ಬೇಡಲು ಕೊಡದಿರೆ, ಖೂ-
ಳರು ಕಡಿದರು ಕೊರಳ !

 

೪೮

ಜನಿಸಿದ ಮೊದಲು ತನಗೆ ಕೈಮೆಯ್ಯಂ-
ತಿರೆ ಬಳಿವಿಡದೆನಗೆ
ಬಡವೆಗಿವಳು ಕರುಣಿಸಿ, ತನ್ನುಗುಳಿದ
ಹರಣವ ನುಂಗಿದಳು.

೪೯

ಹುಡುಕಿ ಹುಡುಕಿ ಹೋದೆಡೆ ಬೆಂಬತ್ತುವ
ಚೆಲುವುಗಳ್ಳರಿಂಗೆ
ಹೆದರಿ ವನವ ಹೊಕ್ಕರೆ, ಹುಲಿಯಾದುದು
ವಿಧಿ, ದೀನದಯಾಲೋ !"

೫೦

ಯುವನಿಯು ನುಡಿಗಳ ಕುದಿವ ಕಥೆಗೆ ಕಿವಿ
ಬಾತು, ಮನಸು ಸೋತು,
ದೊರೆ ಮುಗುಡದ ಹೊರೆಯಲಿ, ಹುಂಗುಟ್ಟುತ
ನಡೆದ ಕೃಪಾಪಥವ.

೫೧

ಮಾತಿನ ಮಣಿ ಮುಳುಗಲು, ತಳದೆದೆಯಿಂ-
ದೇಳ್ವ ಮುಗುಳಿಯಂತೆ ;—
ಮೋಹದ ತೆರೆಯುಗಲಲು,—ಕಂದೆರೆದಳು
ಮಲಗದ ತರಳಾಕ್ಷಿ.

೫೨

ಮಳೆ ಮುಗಿದಿರೆ ಬಿಸಿಲರಳೆ ಹೊಸಬನಂ-
ತಿರೆ ಮಾರುತ ಸುಳಿಯೆ,
ಮರದೆಲೆ ಗಳಿಸಿದ ನೀರಂತಿಳಿದುದು
ಕೆಳದಿಯ ನಯನಾಂಬು.

೫೩

ಭಾವದಿ ಮಿಂಚಿನ ಮಾಲೆಯಾಯ್ತು, ಮೊಗ-
ಕಾಯಿತರುಣಲಕ್ಷ್ಮಿ;
ರಾಮನ ಕಣ್ಣಿಗೆ ತೇಲಿ ಬರಲು ಮಿಹಿ-
ರೆಯ ಮಿಾಸಲ ನೋಟ.

೫೪

ಬಳಲಿಕೆಯಾಗಲಿ, ರುಜೆಯಾಗಲಿ, ಶೋ-
ಕವೊ ಭಂಗವೊ ಇರಲಿ,
ನವವಯಸರ ಮಿಡಿಯೆದೆಯನು ಚಿವುಟುವೆ
ಮದನ, ಹೃದಯಹೀನ !

೫೫

ಮುಳ್ಳೆಲೆಗಳನೊತ್ತರಿಸುತ ಕೇದಗೆ
ಮೆಲ್ಲನೆ ಬಿರಿವಂತೆ,
ಕನ್ನೆಯ ಕರಕರೆಗಳ ತೊಲಗಿಸುತೆಡ
ಕಮ್ಮನರಳಿತಾಗ.

 

೫೭

ಕಣ್ಣ ಕೊನೆಗೆ ಮನ ಹಾರುತ ನೋಟದ
ತಂತಿಯನೆಳೆದೆಳೆದು,
ಹೆಣ್ಣೆದೆಗಿತ್ತುದು ಜೇಂದನಿಗಳ, ಮರು-
ದನಿಗೊಡಲರಸನೆದೆ.

೫೭

"ಸುಂದರಿ ನೀ ಕಣ್ದೆರೆಯಲು, ಲೋಕಕೆ
ಕಣ್ ತೆರೆದಂತಾಯ್ತು ;
ನಂದಿದೆಮ್ಮ ಮನಸಿನ ಬತ್ತಿಗೆ ಬೆಳ-
ಗೊಂದಿಸಿದಂತಾಯ್ತು."

೫೮

ಎಂದ ದೊರೆಯ ನುಡಿ ಕೇಳಿ ಮಿಹಿರೆ ಕರ-
ಣಂಗಳು ನಡುಗುತಿರೆ
ತಾಂಗಿ ಸಖೀಕಂಠವನೆದ್ದಳು ಸಿಂ-
ಗಾರ ಪೊಂಗಿದಂತೆ.

೫೯

"ಹರಣವಿತ್ತ ಕರುಣಾಳುಗೆ ನಮಿಸೆ"ನೆ
ಕೆಳದಿ, ಮುಗುದೆ ತನ್ನ
ಹೃದಯವ ಹಿಡಿದೊಪ್ಪಿಸಿದಂತಿರೆ ಕೈ-
ಮುಗಿದಳು ಪರವಶದಿ.

೬೦

"ಮಲ್ಲಿಗೆಮಾಲೆಗೆ ಧೂಪವೆ ?  ವಿನಯದ
ಬವಣೆ ನಿನಗದೇಕೆ ?
ಸನ್ನತಾಂಗಿ ! ಮೆಯ್‌ನೊಂದಿಹೆ ;  ಬಳಲಿಸಿ
ಕಂದಿಸದಿರು, ಸಾಕು."

೬೧

ರಾಮನ ಮಾತಿಗೆ ಮಿರುಗೇರಿತು ಮೊಗ
ನಿಮಿಷನಿಮಿಷಕವಳ,
ನೇಸರ ಕಿರಣಕೆ ಬೆಟ್ಟದಾವರೆಗೆ
ಬಣ್ಣವೇರುವಂತೆ.

೬೨

ಮೊಗದಿ-ಮೊಗಕೆ ಮನದೊರತೆಯ ಚಿಲ್ಲುತ
ಮುಗುದರಿರಲು, ಕೆಳದಿ
ನುಡಿದಳು, "ಮಹಿಮನೆ, ಕರುಣಿಸು ತವಪದ-
ಪರಿಚಯಪುಣ್ಯವನು."

೬೩

ವಿಜಯನಗರದರಸಾಳ್ಗಳ ಬಲ್ಲಹ-
ನೆನುತಾ ಯುವನಿಯರು
ತಿಳಿದು, ಬೆಚ್ಚಿ ಬೆವರುತ್ತ ಮೊಗಮೊಗ ನೋ-
ಡುತ ಸಂಭ್ರಮಿಸಿದರು.

೬೪

"ಬೆರಗನು ಬಿಡಿ ಕುಲಭೇದವು ಕರುಣೆಯ
ಕಡಿಯದು ಕನ್ನಡದ
ಕಲಿಗಳ ನಾಡೊಳು ; ಹೆಂಗಳ ಮಾನದ
ಸುರಭಿಗಿದೇ ಹೊಲವು.

೬೫

ಒಲುಮೆಯೆ ನಾರಿಯ ಬಲುಮೆಯಿಲ್ಲಿ, ತೋ-
ಳಿನ ಬಲವವಳೊಲವ
ಮುರಿಯದಿಲ್ಲಿ ; ನಲ್ಮೆಯ ತೀರ್ಥಾಂಬುವ-
ನುಗುಳದು ಜನವಿಲ್ಲಿ."

೬೬

ರಾಮನ ಮಾತಿಗೆ ಹೆಣ್ಣಿನ ತೂಗಿತು
ತಲೆಯನೆನಲು, ಕನ್ನೆ
ಬಾಗಿಸಿ ಕೊರಳನು, ಕೋರೆ ನೋಟದಲಿ
ಕೀರಿದಳವನೆದೆಯ.

೬೭

ರತಿ ಬಾಯ್ದೆರೆಯಿತು,—"ಧವಲದೇವಿ ! ನರ-
ಲೋಕದ ನಾರಿಯರು
ನೆನಸದುನ್ನತೋನ್ನತಮನ ನಿನಿ ೀ
ಕೈಗುದುರಿದುದಿಂದು."

೭೮

ಬಡವೆಯು ಕರಗಿದೆದೆಗೆ ಸೌಭಾಗ್ಯದ
ಝರಿ ಸುರಿಯುತ್ತಿರಲು
ನೆರೆತುಂಬದ ಕಣ್ಣಲಿ, ದೊರೆಯಾಸೆಗೆ
ಅಭಿಷೇಚನವಾಯ್ತು.

೭೯

'ಹರಣವಿತ್ತು ಮೆಯ್ಯೊಡೆಯನಾದನೆದೆ-
ಯೆರಕವಿತ್ತು ಬಗೆಯ
ಪಡೆದನಿನ್ನು ನೀ ಪರವತಿ'ಯೆಂದುದು
ಮಿಹಿರೆಗಂತರಂಗ.

೮೦

ಹೋಗದ ಕಡಲಲಿ ಹಾಯಿಯನೆತ್ತಿರೆ
ಹೊಸ ನೌಕೆಗಳೆರಡು,
ಹೇಳಿದಳಾ ಸಖಿ ಕುಲದ ಕಟ್ಟಳೆಯು
ಬೀಳುಗುಂಡನಿಳಿಸಿ.

೮೧

"ಪರಮೋದಾರ ವಿಶಾಲಹೃದಯ ! ಭೀ-
ರುತೆಯು ಮನ್ನಿಸೆನ್ನ.
ಮುರಿಯೆ ಕಟ್ಟಳೆಯು ಮರೆಯಾಗದೆ ಸುಖ ?
ಬಯಲಾಗದೆ ಮಾನ !

೭೨

ಮಂತವನ್ನವು ಕುಲವನ್ನವು ವಿಭವ-
ಸ್ಥಿತಿಯನ್ನವು; ನಮ್ಮ
ಸಂತೆ ನಿಮ್ಮರಮನೆ ಹೊಸ್ತಿಲ ಮೆಟ್ಟಲು
ದೊರೆಯಾಗುವಳೆಂತೋ!

೭೩

ಮನೆಯೊಲವನು ಜನದೊಲವನು ಸಂಪದ-
ದೊಲವ ಗೆಲವಿನೊಲವ,
ಮನದೊಲವಿನ ಸುಳಿಗುಂಡಿಗಿಡುಕೆ ಮುಗು-
ಳವನು ಪಡೆಯಲಹುದೆ?

೭೪

ಹರೆಯದ ಹೆಣ್ಣಿನ ರೂಪು ಹೊಳೆಯ ನೆರೆ,
ಗಳಿಗೆಯದರ ಬಾಳು:
ಹರೆಯವಿಳಿಯೆ, ಮೆಯ್ ಜರಿಯೆ, ಮೂಳೆ ಮೇ-
ಲುಳಿಯೆ, ಬಳಿಕ ಹಾಳು.

೭೫

ಬಾಳದ ಚೆಲುವಿಗೆ ಬಾಳೊಪ್ಪಿಸುವುದು
ಸೋಲ, ಸಾಲದುದಕೆ
ಈಕೆ ಪಠಾನಿ; ಮನಸ್ವಿಯೆಮ್ಮ ಕು-
ಲೀನತೆಗೊಡನಾಡಿ.

೭೬

ಒಮ್ಮೆ ಕಪ್ಪದಿನ್ನೊಮ್ಮೆ ಬಿಳುಪು ಮುಗು-
ಳೊಮ್ಮೆ ಕೆಂಪು; ಮತ್ತೆ
ಒಮ್ಮೆ ಸೋರುವುದು, ಸಾರ್ವುದೊಮ್ಮೆ; ಪುರು-
ಷರ ಮನ ಮುಗಿಲಂತೆ.

೭೭

ಮುಗಿಲು ಜನಪದಕ್ಕೊಂದು, ಮನದ ಬಗೆ
ಜನತೆಗೊಂದು; ನಿಮ್ಮ
ಮನಸು ಮುನಿಸುಗಳ ಮೋಡಿಯನರಿಯಲಿ-
ಕಾರಳೆಮ್ಮ ಮಗಳು,

೭೮

ಕೈಪಿಡಿದವಳಿದೆ ಕಾಂತನ ಭಾವಕೆ
ಕೈಪಿಡಿಯಾಗದಿರೆ,
ಮಾಸಿರೆ ಹಗಲು ಮನೆಗೆ ಬಂದೋಪನ
ಬೇಸರಳಿವುದೆಂತು?

೭೯

ಸುಗ್ಗಿ ಬೆಳೆದು ಬೇಸಗೆಯಾದಂತಿರೆ
ನಲ್ಮೆ ಬಲ್ಮೆಯಾಗೆ,
ಬಗ್ಗಿಸಿ ಡೊಗ್ಗಿಸಿ ಮನಸದು ಮುರಿಯದ
ಬೇಸರೊಣಗಿಸಿರಲು?

೮೦

ಸಮಧರ್ಮರ ಸಮಕುಲಜರ ಸಮವಿಭ-
ವರ ದಾಂಪತ್ಯವನೇ
ಸಮನಿಸುವಾ ಕಟ್ಟಲೆ ಸುವಿವೇಕದ
ಬೆಳೆ, ನಿನಗರಿಯದುದೆ?

೮೧

ನಲ್ಲರ ಕುದಿವೆದೆಯಲಿ ಸಖಿ ಬರೆದಾ
ಸೊಲ್ಲು ಹೊರೆಯಲಿಲ್ಲ;
ಚಿನ್ನದ ಸಂಕಲೆ ಕೊರಳ ತೊಡರೆ, ಬಿಡಿ-
ಸಲು ಕೈ ಬರಲಿಲ್ಲ!

೮೨

ಬಯಕೆಗೆ ಕರುಗುತ ಬೆರೆಯಲುಗುವ ಮನ-
ಸುಗಳ ನಿಲಿಸಲಹುದೆ?
ಅಳಿಪೆಬಾಗಿಲಿಗೆ ಕದವನಿಡುವ ಕಡು-
ಗಲಿತನಕದು ಕಿರಿದೆ

೮೩

'ಮುಗಿಲಿದೆ, ಮಂಜಿದೆ, ಮುಚ್ಚುಮುಚೆ'ನಲು
ಬಿರಿಯದೆ ಮುಗುಳುವುದೆ
ನಸುಕು ಹರೆಯೆ ಕಂದೆರೆವ ಹೂವು? ಹರ-
ಯದಿ ತಡೆಯುವರಾರೋ!

೮೪

ಕೆಳದಿಯು ಬೋಧೆಯ ಮಂಜು ಮುಸುಕೆ ಕ-
ಣ್ಣೆಸಳನೊಂದ ಮಿಹಿರೆ
ದೊರೆಯು ಕಡೆಗೆ ಬಿಡಿಸಿದಳುದುರಲು ಕರು-
ಣವೆ ಹನಿಹನಿಯಾಗಿ.

೮೫

ನಗೆಯುಲಿ ನಲ್ಲೆಯ ಮೊಗವ ಬೆಳಗಿ ನಂದಿ-
ದನು ಕೆಳದಿಗೆ ರಾಮ:—
"ರಮಣಿ! ನಿನ್ನ ನುಡಿನಿರಿಗೆ ಲೋಕವನು
ಮರುಳುಗೊಳಿಸೆ ಸಾಕು.

೮೬

ವಾಣಿಯು ಜಡೆಹೆಣೆಯುವ ಸೈರಂಧ್ರಿತ-
ನಕೆ ನೀ ತಕ್ಕವಳು;
ಆದರೆದೆಯು ಹೂದೋಟದ ಹೊಲಬಿನ
ಹಾದಿಯರಿಯದವಳು.

೮೭

ಜಗದೊಡೆಯನು ಸೃಜಿಸಿದ ವಸ್ತುಗಳಲಿ
ಹೃದಯಕೆ ದೊರೆಯಿಲ್ಲ;
ಆದರೊಳಗುಂದಿಸಿದ ನೇಹಕೆ ಮಿಕ್ಕಿದ
ಭಾಗ್ಯವೆ ಬೇರಿಲ್ಲ.

 

೮೮

ನೆಲಕೆ ನೀರು, ಮಾನಸಕೆ ನೇಹ, ಪಾ—
ವನಸಾಮಗ್ರಿಗಳು:
ಕೆಸರ ಕಿಸುರ ತೊಳೆತೊಳೆಯುತ ತಿಳಿತಿಳಿ—
ಯಾಗುತ ಹರಿಯುವವು.

೮೯

ರತ್ನ ಪರ್ವತದ ಗಾತ್ರವಿಹುದೆ? ಮ—
ಲ್ಲಿಗೆ ಮರುದಿನಕಹುದೆ?
ಉತ್ತಮವಲ್ಲ ಕಿರಿದು; ಯೌವನವಂ—
ತಿರೆ ದೂಷಿಸಬಹುದೆ?

೯೦

ಹುಣ್ಣಿಮೆ ತಿಂಗಳಿಗೊಂದದು ಕಳೆದರೆ
ಚಂದ್ರನ ಬರವಿಂಗೆ
ಕಣ್ಣೆಳಸದೆ ರಾತ್ರಿಗೆ? ಮೆಯ್ ಕುಂದಲು
ಚೆಲ್ವಿಕೆ ಕಿರಿದಹುದೆ?

೯೧

ಕನ್ನಡರಾಯನೆರಕವೆನಲೆರಕದ
ಕನ್ನಡಿ; ಗುಣವಂತೆ
ಕನ್ನೆಯು ಕೈಯಲಿ ಪಳಗಿದಂತೆ ಮಿರು—
ಗೇರದಿರದು ಕಾಂತೆ!

೮೪

ಕೆಳದಿಯ ಬೋಧೆಯ ಮಂಜು ಮಸುಕಿ ಕ-
ಣ್ಣೆಸಳನೊಂದ ಮಿಹಿರೆ
ದೊರೆಯ ಕಡೆಗೆ ಬಿಡಿಸಿದಳುದುರಲು ಕರು-
ಣವೆ ಹನಿಹನಿಯಾಗಿ.

೮೫

ನಗೆಯುಲಿ ನಲ್ಲೆಯ ಮೊಗವ ಬೆಳಗಿ ನುಡಿ-
ದನು ಕೆಳದಿಗೆ ರಾಮ:—
"ಯಮುನೆ! ನಿನ್ನ ನುಡಿನಿರಿಗೆ ಲೋಕವನು
ಮರುಳುಗೊಳಿಸೆ ಸಾಕು.

೮೬

ವಾಣಿಯ ಜಿಡೆಹೆಣೆಯುವ ಸೈರಂಧ್ರಿತ-
ನಕೆ ನೀ ತಕ್ಕವಳು;
ಆದರೆದೆಯು ಹೂದೋಟದ ಹೊಲಬಿನ
ಹಾದಿಯರಿಯದವಳು.

೮೭

ಜಗದೊಡೆಯನು ಸೃಜಿಸಿದ ವಸ್ತುಗಳಲಿ
ಹೃದಯಕೆ ದೊರೆಯಿಲ್ಲ;
ಆದರೊಳಗುದಿಸಿದ ನೇಹಕೆ ಮಿಕ್ಕಿದ
ಭಾಗ್ಯವೆ ಬೇರಿಲ್ಲ.

 

೮೮

ನೆಲಕೆ ನೀರು, ಮಾನಸಕೆ ನೇಹ, ಪಾ–
ವನಸಾಮಗ್ರಿಗಳು:
ಕೆಸರ ಕಿಸುರ ತೊಳೆತೊಳೆಯುತ ತಿಳಿತಿಳಿ–
ಯಾಗುತ ಹರಿಯುವವು.

೮೯

ರತ್ನ ಪರ್ವತದ ಗಾತ್ರವಿಹುದೆ? ಮ–
ಲ್ಲಿಗೆ ಮರುದಿನಕಹುದೆ?
ಉತ್ತಮವಲ್ಲ ಕಿರಿದು; ಯೌವನವಂ–
ತಿರೆ ದೂಷಿಸಬಹುದೆ?

೯೦

ಹುಣ್ಣಿಮೆ ತಿಂಗಳಿಗೊಂದದು ಕಳೆದರೆ
ಚಂದ್ರನ ಬರವಿಂಗೆ
ಕಣ್ಣೆಳಸದೆ ರಾತ್ರಿಗೆ? ಮೆಯ್ ಕುಂದಲು
ಚೆಲ್ವಿಕೆ ಕಿರಿದಹುದೆ?

೯೧

ಕನ್ನಡರಾಯನೆರಕವೆನಲೆರಕದ
ಕನ್ನಡಿ; ಗುಣವಂತೆ
ಕನ್ನೆಯ ಕೈಯಲಿ ಪಳಗಿದಂತೆ ಮಿರು–
ಗೇರದಿರದು ಕಾಂತೆ!

೯೨

ಚೆಲುವಿಗೆ ಹಿಗ್ಗದ ಒಲವಿಗೆ ಬಗ್ಗದ
ಕುರುಡುಕೊರಡಿನೆದೆಯು
ಶತಶುಂಠತೆ ಧರ್ಮದ ತಿರುಳೆನ್ನುವ
ಮರುಳನಲ್ಲ ರಾಮ.

೯೩

ಮನಸು ಮೆಚ್ಚಿ ಮಾಡುವುದೆ ಧರ್ಮ, ಧಾ-
ರ್ಮಿಕನೆ ಧೈರ್ಯಶಾಲಿ;
ಜನಕೆ ಬೆಚ್ಚಿ ಮನಮುಚ್ಚಿರೆ, ಬೇಲಿಯ
ಹೊಲದಿ ಮೇವ ಗೂಳಿ!

೯೪

ಧರ್ಮವೆಲ್ಲ ಮತಕೊಂದೆ, ದೇವರವ–
ನೊಂದೆ, ಹೆಸರು ಬೇರೆ;
ಮರ್ಮವೆಲ್ಲಕಸುವೊಂದೆ; ಪದಾರ್ಥವ–
ದೊಂದೆ ಭಾಷೆ ಬೇರೆ.

೯೫

ಕೋಮಲಾಂಗವಿದರೊಳು ಸುಳಿಸುಳಿವಾ
ಕೋಮಲತರ ಮನವ
ನೋಯಿಸುವಧಮನದಾವನೊ ನೆಮ್ಮದ
ನಾಮಭೇದಕಾಗಿ!

೯೬

ವಿಭವವೀ ಭುಜಕೆ ತೊತ್ತಾಗಿರೆ, ಬಿಗಿ-
ವಿಡಿವ ಕೈಗೆ ಬೇರೆ
ವಿಭವ ಬೇಕೆ? ಅಂದಳವೇರಿರೆ ಹಾ-
ವುಗೆಯು ತೊಡುಗೆ ಬೇಕೆ?

೯೭

ಉದುರುದುರುತಲಿರೆ ಸುರಭೂಜದ ಸಮು,
ಸೆರಗನೊಡ್ಡಿ ಹಿಡಿದು
ಮುಡಿಯನೇರಿಸೌ। ಮಾಂಗಲ್ಯವ ಪಾ-
ಳ್ಗೆಡೆಯಿಸದಿರು ಚದುರೆ!

೯೮

ಕುಳಿತ ಮಿಹಿರೆಯುಂಗಟದಿ ನೆಲದೊಳುಗು-
ರಿಸಲು ಸಮ್ಮತಿಯನು,
ಕೆಳದಿ ಮೌನಮುದ್ರೆಯನೊತ್ತಿರೆ, ದೊರೆ-
ಗಡವಾಯಿತು ನಲ್ಮೆ.

೯೯

ಹುಲಿಯು ಬೇಟೆಯೊಳಗೆ ಮೊಳೆದು ಹುಲಿಯು ತೆರದೊಳಡಗಿ ಬೆಳೆದು
ಬಳಿಕ ವೈರವಡೆದು, ಕನ್ನಡಿಗರ ಭಾಗ್ಯಸುರಭಿಯು
ಹಿಡಿಯಿತಂತದೊಂದು ಹಾಳು ಬೇಟವಿಂತು; ದೊರಗದೇಕೆ
ಘಟಿಸಿತಯ್ಯೊ। ವೀರನರಪತಿಗಳ ಮುಕುಟ ರತ್ನಕೆ ।

೯೨

ಚೆಲುವಿಗೆ ಹಿಗ್ಗದ ಒಲವಿಗೆ ಬಗ್ಗದ
ಕುರುಡುಕೊರಡಿನೆದೆಯ
ಶತಶುಂಠತೆ ಧರ್ಮದ ತಿರುಳೆನ್ನುವ
ಮರುಳನಲ್ಲ ರಾಮ.

೯೩

ಮನಸು ಮೆಚ್ಚಿ ಮಾಡುವುದೆ ಧರ್ಮ, ಧಾ-
ರ್ಮಿಕನೆ ಧೈರ್ಯಶಾಲಿ;
ಜನಕೆ ಬೆಚ್ಚಿ ಮನಮುಚ್ಚಿರೆ, ಬೇಲಿಯ
ಹೊಲದಿ ಮೇವ ಗೂಳಿ!

೯೪

ಧರ್ಮವೆಲ್ಲ ಮತಕೊಂದೆ, ದೇವರವ-
ನೊಂದೆ, ಹೆಸರು ಬೇರೆ;
ಮರ್ಮವೆಲ್ಲಕಸುವೊಂದೆ; ಪದಾರ್ಥವ-
ದೊಂದೆ ಭಾಷೆ ಬೇರೆ.

೯೫

ಕೋಮಲಾಂಗವಿದರೊಳು ಸುಳಿಸುಳಿವಾ
ಕೋಮಲತರ ಮನವ
ನೋಯಿಸುವಧಮನದಾವನೊ ನಿಮ್ಮದ
ನಾಮಭೇದಕಾಗಿ!

೯೬

ವಿಭವವೀ ಭುಜಕೆ ತೊತ್ತಾಗಿರೆ, ಬಿಗಿ–
ಪಿಡಿವ ಕೈಗೆ ಬೇರೆ
ವಿಭವ ಬೇಕೆ? ಅಂದಳವೇರಿರೆ ಹಾ–
ವುಗೆಯು ತೊಡುಗೆ ಬೇಕೆ?

೯೭

ಉದುರುದುರುತಲಿರೆ ಸುರಭೂಜದ ಸಮ,
ಸೆರಗನೊಡ್ಡಿ ಹಿಡಿದು
ಮಡಿಯನೇರಿಸೌ। ಮಾಂಗಲ್ಯವ ಪಾ–
ಳ್ಗೆಡೆಯಿಸದಿರು ಚದುರೆ!

೯೮

ಕುಳಿತ ಮಿಹಿರೆಯುಂಗಟದಿ ನೆಲದೊಳುಗು-
ರಿಸಲು ಸಮ್ಮತಿಯನು,
ಕೆಳದಿ ಮೌನಮುದ್ರೆಯನೊತ್ತಿರೆ, ದೊರೆ–
ಗಡವಾಯಿತು ನಲ್ಮೆ.

೯೯

ಹುಲಿಯು ಬೇಟೆಯೊಳಗೆ ಮೊಳೆದು ಹುಲಿಯು ತೆರದೊಳಡಗಿ ಬೆಳೆದು
ಬಳಿಕ ವೈರವಡೆದು, ಕನ್ನಡಿಗರ ಭಾಗ್ಯಸುರಭಿಯು
ಹಿಡಿಯಿತಂತದೊಂದು ಹಾಳು ಬೇಟವಿಂತು; ದೊರಗದೇಕೆ
ಘಟಿಸಿತಯ್ಯೊ। ವೀರನರಪತಿಗಳ ಮುಕುಟ ರತ್ನಕೆ ।

೧೦೦

ನೆಲಕೆ ಬೀಳ್ವ ಮೊದಲೆ ತಂದೆಯಳಿದ ಬಡವು ಹಸುಳೆ ಬೆಳೆದು
ನೆನೆದು ಮರುಗಿ, ಹೇಳಿ ಕೇಳಿ ಬಂದ ತೆರದಿ ಬಗೆಯಲಿ
ಬಲಿದ ಪಿತನ ರೂಪನಪ್ಪಿ ಕರಗುವಂತೆ, ಚರಿತೆಯ ನಿಜ–
ವರಿಯದಿನಿತು ಬರೆದೆನಮ್ಮ। ನುಡಿಯೊಡತಿಯೆ, ಮನ್ನಿಸು।

೧೯೩೪

# ಕೃಷ್ಣಕುಮಾರಿ

೧

ಮೊಳೆದು ಮೊನೆಗಂಡಾಗಿ, ಕಳದಲಿ
ಬಳೆದು ಚಲಗಂಡಾಗಿ, ಸಮರವ
ಕುಡಿದು ಮುಳಿಗಂಡಾಗಿ, ಕಾಲನ ದವಡೆಯನು ನುರ್ಗಿ
ಸೆಳೆದು ಕೆನ್ನಾಲಗೆಯನದರಲಿ
ಮಲಗಿ ಮಲೆದರದಾರೊ, ಮರುಭೂ-
ಮಿಯಲಿ ಜೀವವ ಬಿತ್ತಿ ಗಂಡಿನ ಸಿರಿಯ ಬೆಳಸಿದರೋ,—

೨

ಅವರ ಬಸಿರಲಿ ಹೇಡಿ 'ಸಿಂಗ'ನೆ?
ಅಮರನಂದನದಲಿ ಪಲಾಂಡುವೆ?
ಸುರಪತಿಯ ಮೀಸೆಗೆ ನರೆಯೆ? ದಿಗ್ಗಜಕೆ ಕುರಿಗೂಸೆ?
ಹರಿದನೇ ರಾಣೇಂದ್ರವಂಶದ
ಧವಲಮೌಕ್ತಿಕ ಸರವ! ಹೆಸರಿನ
ಹೆರೆಯನಗಿದನೆ! ಪೌರುಷವ ಮಣಿಯನು ಬಿಸಾಡಿದನೆ!

೩

ಮಗಳ ಕರಕಮಲಕ್ಕೆ ಹಾರುವ
ಅಳಿಯೆದೆಯ ದುರುದುಂಬಿಗೊಬ್ಬಿನ
ನೊರಜುಗಳ ನುಗ್ಗೊರಸಲಾರದೆ, ನೆಲಕೆ ಹೊರೆಯಾದ
ಶಿರವ ಮರಗೈಯಲ್ಲಿ ಮಲಗಿಸಿ
ಮಲಗಿರಲು, ಲಲಿತಾರುಣಾಂಬರೆ,
ಅಪರಸಂಧ್ಯಾ ದೇವಿಯಂತಿರೆ, ಬಂದಳರಗುವರಿ,

೪

ಮೊಗಕೆ ಕತ್ತಲೆಯಾಯ್ತು, ನಯನದ
ಹೊಲಬು ಮಾಸಿತು, ಮನದ ಹೊದರಲಿ
ತಲೆಯ ಮರಸುತ ಸುರುಳಿತಬಲಾಘಾತಿ ದುರ್ಬುದ್ಧಿ;—
"ಮಗಳೇ, ಮಗಳೇ!" ಎನುತ ಮುಂದಿನ
ನುಡಿಯನರಿಯದೆ, ಕೊಲೆಯ ಕೊಂಡಾ—
ಟದಲಿ ಹಿಡಿವಂತಪ್ಪಿದನು ಕೃಷ್ಣಾಕುಮಾರಿಯನು.

೫

"ತಂದೆ! ನಿನಗೇಕಿಂದು ಕಳವಳ?
ಬಂದುದೇನು ವಿಪತ್ತು? ಧೈರ್ಯದ
ಸಂದು ಕಡಿವಂತಿದೆಯಲಾ!" ಎನೆ, ತಡೆದು ಗದಗದಿಸಿ,
"ನೊಂದಿಹೆನು, ಮಾತಾಡಲೇಂ! ನಿ-
ನ್ನಿಂದ ಮೇವಾಡಕ್ಕೆ ವಿಲಯವೆ?
ಕಂದ! ಬರುತಿದೆ ಸಕಲ ರಾಜಸ್ಥಾನನೃಪಸೇನೆ!

೬

"ತನತನಗೆ ಕೊಡು ಕೊಡು ಎನುತ ಮದ-
ಮುದಿತ ನೃಪಕಲಭಗಳು ಕರವನು
ತುಡುಕುತಿರಲಾರ್ಗೀವೆನೋ! ಸುತೆ, ನಿನ್ನ ಹೆತ್ತೆನಗೆ
ಗತಿಮತಿಗಳಳಿದುವು; ಮಹಾಹವ—
ಕುದಯಪುರವಸ್ತಮಿಸದೇ? ಸುಂ—
ದರಿ! ವನಾಂತಕೆ ನಡೆವೆನಾದೊಡೆ ನಿನ್ನನೆಲ್ಲಿಡಲಿ?"

೭

ಎನುತ ತಲೆಗುಸಿಯುತ್ತ, ಹರಣದ
ಭಯ ಕೊಳೆದು ನಂಜಾದ ದುರ್ಧರ-
ಹೃದಯದುರ್ಗಂಧವನು ಸೂಸಿದನಿಂತು ನಿರ್ಲಜ್ಜ-:
"ಹೆಣವ ಹುಗಿಯದೆ ಹದ್ದುಗಳ ಹಾ-
ರಿಕೆಯು ತಡೆಯಲಿಕಹುದೆ? ವಿಷವನು
ಕುಡಿದು ಮಡಿ! ಮರುನುಡಿಯದಿರು ಮಗಳಾದೊಡೆನಗೆ"ಂದ

೮

ಬೆದರಿದಳೆ? ಕೆದರಿದಳೆ ನಲ್ನುಡಿ
ತನುವ ಪಡೆದಂತುಸಿರಿದಳು– "ನಗು-
ನಗುತ ಮಡಿವುದು ರಾಜಪುತ್ರಿಯನನ್ಯಸೌಭಾಗ್ಯ!
ಮಡಿವೆನಂಜದಿರಾದೊಡೊಂದನು
ನುಡಿವೆ:– ನೀ ಮಗಳೊಡನೆ ಮಾನವ
ಮಡುಹದಿರು, ಕುಲದುರಿಗಳೆದು ಮಸಿಗೆಂಡವಾಗದಿರು!

೯

ಅರಿಯೆಯಾ ಚಿತ್ತೋರದುರ್ಗದ
ಪರಮಪುಣಾಹುತಿಯ ಭೂತಿಯ?
ಕುಲದ ದೈವವನೇಕಲಿಂಗನ ನೆನೆನೆನೆದು, ಕೈಯ
ಖಡುಗವರಿರಕ್ತದೊಳಗೀಸಾ-
ಡುತಿರೆ, ಘುಡುಘುಡಿಸುತ ದಿಗಂತದ
ಹೊಡೆಗೆ ಕೀರ್ತಿಯನಪ್ಪಳಿಸಿದ ಪರಾಕ್ರಮಾರ್ಣವರ?

೧೦

ಗಂಡುಗಲಿಗಳು ನಲಿನಲಿದು ರಿಪು-
ರುಂಡಗಳ ಚೆಂಡಾಡೆ, ಪಂಕಜ-
ಷಂಡದಲಿ ಜಲದೇವಿ ನರ್ತಿಸುವಂತೆ, ಧಗಧಗಿಪ
ಕುಂಡದಲಿ ಕುಣಿಕುಣಿದು ಪುಲಕದ
ತಂಡ ಬೆವರಲಿ ತುಳುಕೆ, ವಿಲಯದ
ತಾಂಡವವ ತುಳಿದಾಡಿ ಪದ್ಮಿನಿಯೆಡೆಗೆ ನಡೆಯುವೆನು!

೧೧

ಧುರದ ವಾರ್ತೆಗೆ ನಡನಡುಗಿ ನರ-
ನರಿ ಮುಸುಡ ತಿರುಹುತ್ತ ನಡೆದನು;
ಕಳುಹಿದನು ಹಾಲಾಹಲವ ಹೊಸ ಹೊನ್ನ ಬಟ್ಟಲಲಿ।
ಕೊರಗಿದಳು, ವೀರತೆಯ ಬರಗಾ-
ಲದಲಿ ಬಾಡುವ ತುಲಸಿಯೆನೆ! ಕೈ-
ವಿಡಿದಳಿನಿಯನ ಗಲ್ಲವನೆ ಹಿಡಿವಂತೆ ಬಟ್ಟಲನು!

೧೨

ಅಂಬುಜದ ಬಾಯ್ದೆರೆಗೆ ಸಿಡಿಲಿನ
ತುಂಬಿ ಹೊಕ್ಕಿತು। ಪದ್ಮಿನಿಯ ಪದ-
ದಿಂಬನೇ ನೆನೆಯುತ್ತ ನುಂಗಿದ'ಳಕಟ। ಕೊಲಲಾರೆ
ಕಂಬುಕಂಧರೆಯಿವಳನೆ'ಂದಾ
ನಂಜು ಮರಳಿತ್ತೆನಲು ಹಿಮದಲಿ-
ತಾಂಬುಜಾನನನೆ ಕಾರಿದಳು, ಭೂತಳದಿ ಹೊರಳಿದಳು!

೧೩

ವಂರಳಿ ಕುಡಿದಳು, ಮತ್ತೆ ಕಾರಿದ-
ಳಬಲೆ! ಹಾಲಾಹಲಕೆ ಕೈಯೇ
ಮಿಗಿಲೆನಲು ತಂದಿದ್ದ ನವವಿಷರಸವ ಕೈಕೊಂಡಂ,
"ಪಡೆದೊಡೆಯ! ಅಕ್ಕಿಸು ವಿಹವ; ನಿ-
ನ್ನಡಿಗೊಡಲನೊಪ್ಪಿಪೆ! 'ಸಿಸೋದಿಯ'
ಕುಲದ ಪೂರ್ಣಾಹುತಿಯು ಕೈಕೊಳ್ಳೆ"ನುತ ಹೀರಿದಳು!

೧೪

ಬೀತು ಹೋಯಿತು ರಾಜಪುತ್ರರ
ಪೂತ ತೇಜದ ಕೆಂಡಸಂಪಗೆ!
ಘಾತಿಸಿದ ವನಹರಿಣಿಯಂತೆ ಕುಮಾರಿ ಕೆಡದಿರಲಂ
ಕಾತರಿಸಿ ಕುರರಿಗಳ ತೆರದಲಿ
ಹಾತೊರೆಯಿತಂತಃಪುರವು! ವಿಷ-
ವಾತವೆನೆ ವಾರ್ತೆಯನು ಸಂದೇಶಿಸಿದನರಿಗಳಿಗೆ

೧೫

"ರಣಕೆ ಹೆದರಿದ ಹೇಡಿ! ಮಗಳನು
ಮಡುಹಿದಧಮಂ! ಕುಲೀನವಂಶದ
ಕೊಡಲಿ! ನಿನ್ನನು ಸದೆವೆನೆ"ನುತರಸರುಂ ಸಮೂಹಿಸುತ
ಖಡುಗದೋಲೆಯ ಕಳುಹೆ, ಹಾಹಾ-
ರುತ ಕುರುಡಂ ಕುರಿಯಾಗಿ, ದುರ್ಮಂ
ತ್ರಿಗಳ ಕುರುಬತನಕ್ಕೆ ಕುಲನೆಲಗಳನು ಮಾರಿದನು!

೧೬

ನರಗೆ ಬಾಗದ ಹಣೆಯು ಬೆಳಗಿದ
ಘನಕಿರೀಟವನಡಿಮಗುಚಿ 'ಕುಂ-
ಪನಿ'ಯ ಬಾಗಿಲ ಭಿಕ್ಷೆಯೋಡನು ಮಾಡಿ, ಮುದುವಡೆದು
ಸವಿದನುಂಬಳಿಯುಂಬಲಿಯ ಕೈ-
ಮುಗಿದು ಕೊಂಡನು ವೈರಿ ಭೀತಿ-
ಜ್ವರಕೆ ಹೊದೆಯು ಪರರ ಸಾಮಂತಿಯ ಕಂಬಳಿಯು!

೧೭

ಮೊದಲದೊಬ್ಬ ಕನೋಜನೃಪ ಮಗ-
ಳೆದೆಗೆ ಶೂಲಲನಿಕ್ಕಿ, ಸ್ವಾಂತ
ತ್ರ್ಯವನು ಘೋರಿಗೆ ಮಾರಿ ಸತ್ತನು; ಮತ್ತೆ ಮರಹುಟ್ಟಿ
ಪಡೆದು ಮಗಳನು ತಿಂದು, ಮಾನವ
ಹುಗಿದು, ಬದುಕಲು ಕುಂಪನಿಯ ಬಾ-
ಯಙಗಳ ನುಂಗಿದನವನೆ ನಿಜ, ಇತರಂಗಿದರಿದರಿದು!!

೧೯೩೪

## ಸೂಕ್ತಿ

ಎಲೆಲೆ ಮಲ್ಲಿಗೆ! ನಿನಗರಸಿಯ ತುರುಬಿನ
ಸೊಬಗು ಬೇಕೆಂಬ ಮನವಿರೆ ಒಡವೆಯಂ
ಮನೆಯ ಬಾಗಿಲಲಿ ಮೊಗದೋರಂ.

# ಶ್ವಮೇಧ

## ಅಥವಾ

# ನಾಯಿ ನಡತೆ

'ನಾಯಿಬಾಳ ಬಾಳ್ದನೆ'ಂದು ಹೀನಜನವ ಹಳಿಯುವವರೆ!
ಕೇಳಿ ನಾಯಿಯೊಂದು ನಡೆದ ನಡತೆಯನ್ನು, ನಿಮ್ಮ ಮನದ
ಭಾವ ಬದಲದಿರದು; ಕಣ್ಣ ನೀರು ಸುರಿಯದಿರದು; ಮನುಜ–
ಮಾನಭೂಮಿ ಕುಸಿದು, ಹೃದಯಕುಹರ ಬಾಯ ತೆರೆಯದಿರದು.
ಹಾಳು–ಕಟ್ಟುಕತೆಯಿದಲ್ಲ, ನೋಡಬಹುದು ನರಿವೊರಲಿ
ನಾಯಿ ಮಲಗಿದೆಡೆಯ ಮೇಲೆ ಮಾಡಿಸಿದ ಸಮಾಧಿ–ಒಡೆಯ
ಬೀಡುಗೊಂಡ ಬಳಿಯೆ, ಚಳಿಯ ಗಾಳಿಮಳೆಯ ಬಿಸಿಲ ಜಳವ
ತಾಳಿ, ಮೇಲೆ ಹುಟ್ಟಿ ಸಾವ ಹುಲ್ಲ ಬಾಳುಬೀಳುಗಳಲಿ
ಬೀಗಿ–ಬತ್ತಿ, ಕರುಣಕಥೆಯ ಹಾಡುವುದನು; ಕಲ್ಗಳೆಲ್ಲ
ಕೇಳಿ ಮೆಯ್ಯ ಮರೆದಿಹುದನು, ಬೋಳುಗುಡ್ಡೆ ಬಿದ್ದಿಹುದನು! ೧೦
ಅಲ್ಲೆ ಹತ್ತಿರದಲಿ ಪೊದಲು ನೆಲ್ಲುಬೈಲ ಮೇಲೆ ಮುಳಿಯ-
ಹುಲ್ಲ ಮಾಡಿನಡಿಯಲೊಬ್ಬ ಜೈನನಿದ್ದನವನ ಹೆಸರು
ಧರ್ಮರಾಯಸೆಟ್ಟಿ; ಅವನ ಗುಣವು ಮೇಲೊ, ಹೆಸರು ಮೇಲೊ
ಎನ್ನಲಾರೆ; ಕೈಯ ಹಿಡಿದ ಸುದತಿ ಪದ್ಮವತಿಯ ಶೀಲ
ವಲ್ಲಭನಲಿ ಎರಕವಡೆದೊ, ತಾಯ ಬಳಿಯೆ ರೂಪುಗೊಂಡೊ
ಚಿನ್ನವಾದುದೆಂನು ತಿಳಿಯೆ. ಆದರವರ ನಲ್ಮೆಯೆಂಬ
ಬೆಲ್ಲವಚ್ಚುಗೊಳ್ಳಲಿಲ್ಲ, ಮುದ್ದುಗೂಸು ಮೂಡಲಿಲ್ಲ;
ಹೊಲದ ಮನೆಯ ಕೆಲಸ ಮುಗಿಯೆ ಮನದ ಮೋದಕೇನು ಇಲ್ಲ!
ಮನದಲಂಪನಿಡಲಿಕಾಗಿ ಕರಡಿಗೆಯನು ತಂದನೇನೊ?
ಚೆಲುವಿನೊಂದು ಮರಿಯು,–ಹೊಳೆವ ಕರಿಯ ಮೆಯ್ಯ, ನೇರಗಿವಿಯ, ೨೦
ಹರಳುಗೆಂಪು ತೆತ್ತಿದಂತೆ ಮಿರುಗುತಿರುವ ಮೂಗುಮೊನೆಯ,

ಕಿರಿಯ ಕಣ್ಣು, ಬೆರಳ ಸರಿಯ ಬಾಲವಲೆವ, ಕೋಲುಗಾಲ,
ಚಿವುಟೆ ಕೈಗೆ ಸಿಕ್ಕದಿರುವ ಮುಟ್ಟೆ ಮೆಯ್ಯ ಜಕ್ಕುಲಿಸುವ
ನಯದ ರೋಮ ಹೊದೆದ ನಾಯಿ—ಮನೆಗೆ ಸೆಟ್ಟಿ ತಂದನೇನೊ?
ಬಿಳಿಯ-ಸೀಮೆನಾಯಿಯಲ್ಲ, ಹಡಗಿನಿಂದ ಹಾರಿ ಬಂದು
'ಟಾಮಿ' 'ಟೈಗ'ರೆಂಬ ಬಿಂಕದಂಕದಿಂದ ಬೆಳೆದುದಲ್ಲ.
ಹಳೆಯ ಕಾಲ, ಬಿಳಿಯ ಬಣ್ಣ ಬಂದು ಕಣ್ಣ ಬೆಳಗಲಿಲ್ಲ;
ಕರಿಗಳಂದು ಕಾಡನಿಳಿದು ನಾಡ ಪಶುಗಳಾಗಲಿಲ್ಲ.
ಬಡವನೊಡ್ಡ ದೊಮನವನ ಹರಿದ ಹೆಡಗೆಯಲ್ಲಿ ಕಣ್ಣ
ತೆರೆದ ಬಡವು ಕರಿಯ ನಾಯಿ; ಪದ್ಮಾವತಿಯ ಕೈಯ ಹಾಲ  ೩೦
ಕುಡಿದು ಕುಣಿದು, ಸೆಟ್ಟಿಯಡಿಗೆ ಎಸಳುನಾಲಗೆಯಲಿ ಪೂಜೆ—
ಯೆಸಗಿ ಭಕ್ತಿಯಲ್ಲಿ ಮಣಿದು ಮಡಿಲ ಬೇಡಿ ಪಡೆದು, ಕೊರಳ
ತೊಡೆಯಲಿಟ್ಟು ಕಣ್ಣನರ್ಧಮುಚ್ಚಿ, ಕಂಠ ಪೂಜಿಸುತಿರೆ—
ಒಡೆಯನೆದೆಯ ಕೋಟರದಲಿ ಪವಡಿಸಿದ್ದ ಪುತ್ರಮೋಹ
ತೆರೆದು ಕಣ್ಣ ಕೆದರಿ ಗರಿಯ ಹಾಲಿ ಕೈಯಮೇಲೆ ಕುಳಿತು—
ಕೊಳಲು ನಡುಗುತಿರುವ ಬೆರಳು ತಲೆಯ ಹರಸೆ ಬೆನ್ನ ಸವರೆ—
ಬಾಲ ಸುಖದ ಭಾರದಲ್ಲಿ ತೊನೆಯುತಿರಲು ಬಳೆದು ಬುದ್ಧಿ-
ಕಲಿತು ಬಲಿಯಿತದು, ವಿಧೇಯತೆಯನು ಒರೆವ ಕಲ್ಲೊ, ಒಡೆಯ-
ನಪ್ಪಣೆಯನು ತೊಡುವ ಬಿಲ್ಲೊ ಎನಲು; ಸೆಟ್ಟಿಯದರ ರೂಪ
ಗುಣಸಮೃದ್ಧಿಗಳನು ಬಗೆದು ಹೆಸರನೆರಡನಿಟ್ಟನದರ  ೪೦
ಚೆಲುವಿಗಾಗಿ ಚಂದುವೆಂದು, ಬುದ್ಧಿಗಾಗಿ ಬಂಟನೆಂದು.

ಹಗಲು ಸೆಟ್ಟಿಗಾಯ್ತು ಚಂದು ಗೆಡೆಯ ಬಿಡದ ಗೆಳೆಯ, ಕೊಡುವ
ತರುವ ಕೆಲಸದಾಳು, ಬೆನ್ನ ಬಳಿಯೆ ಮೆಯ್ಯ ಕಾವ ಬಂಟ;
ಇರುಳು ಕಾಲ ದಿಂಬು, ಮಕ್ಕಳಿರದ ಶೂನ್ಯಶಯ್ಯೆಗಿಂಬು,
ಜಡಿವ ಕತ್ತಲೆಯಲಿ ನುಸುಳಿ ಸುಳಿವ ದುರುಳರಳ್ಳೆಗಂಬು;
ಒರಗುತಿರುವ ವೇಳೆ ಮನೆಯೊಳಡಿಯಿಡುವರ ಮೇಲೆ ಬೀಳ್ವ
ಸಿಡಿಲು; ಕಾರ್ಯವಶದಲೊಡೆಯ ದೂರಕೈದೆ ಬರುವ ವರೆಗೆ

ಮನೆಗೆ ಕೋಟೆ, ಒಡತಿಯುಡಿಯ ನಿಧಿಗೆ ಕೃಷ್ಣಸರ್ಪವೆನಲು,
ಪಡವ ಪುಣ್ಯವಿಲ್ಲದಾಯ್ತೊ ಹಲವುಗಾಲವಿಂಥ ನಾಯು!
ನೆರೆಯ ಹಳ್ಳಿಯಲ್ಲಿ ಗುಮ್ಮಣಾಳ್ವನೆಂಬ ಧನಿಕನಿದ್ದ   ೫೦
ಹಣದ ಪೆಟ್ಟಿಗೆಯಲಿ ತನ್ನ ಹರಣವೆಲ್ಲವಿಟ್ಟು, ಕಣ್ಣ
ರಕುತವೆಲ್ಲ ಮಾರಿ, ಬಡವರವಸರದಲಿ ಪ್ರೇತದಂತೆ
ಹಿಡಿದು ಬಿಡದೆ ಪೀಡಿಸುತ್ತ; ನಡೆವ ತನ್ನ ಹೆಣವ ಹೊರವ
ಅಬಲಗವನೆ ಕಾಲ, ಮಲೆವ ಸಬಲಗವನೆ ಸಾನುಕೂಲ.
ಅವನು ತೆಗೆದ ಮನೆಗಳೆಷ್ಟೊ, ಸುಲಿಗೆ ಮಾಡಿದೊಕ್ಕಲೆಷ್ಟೊ,
ಹಟವ ಸಾಧಿಸಲ್ಕೆ ಗೈದ ವ್ಯಕ್ತ–ಗುಪ್ತ ವಧೆಗಳೆಷ್ಟೊ!
ಅವನ ಮನೆಯ ಮೂಲದಾಳು, ಅವನ ಬಡಿಗೆಯುಂಬ ಕೂಳಂ
ಕುಡಿಯನೊಬ್ಬನೊಂದು ದಿವಸ ಒಡೆಯನಡಿಗೆ ನಮಿಸುವಾಗ
ಬಿರಿವ ಬಾಸುಳಿಂದ ಬೆನ್ನು ಬಾಗಲಿಲ್ಲವೆಂದು, ನೂಕಿ
ತುಳಿದು ಜಪ್ಪಿ ಗುದ್ದುತಿರುವ ಧನಿಯ ಕೆಡೆದ ಕಾಲಹುಳುವ-   ೬೦
ನಕಟ! ಕಂಡ ಧರ್ಮರಾಯ ಸೆಟ್ಟಿ ತನ್ನ ಕೆಲಸದಲ್ಲಿ
ನಡೆಯುತಿರಲು ಬಂಟನೊಡನೆ;–ಮನವು ಕರಗಿ ಹರಿದುಹೋಯ್ತು.
ಬುದ್ಧಿ ಮುರುಟಿ ಬಾಡಿ ಬಿತ್ತು, ಜೀವ ಕೆಂಡಕೆಂಡವಾಯ್ತು,
ದೇಹ ಕಲ್ಲಿನಂತೆ ಇತ್ತು, ಮಾತು ನಾಲಗೆಯಲಿ ಸತ್ತು
ಹುಟ್ಟಿ ನರಳಿ ನೆಗೆದುದಿಂತು–"ಸಾಕು, ಸಾಕು, ಆಳ್ವರೇ!
ಕೋಪ ಬಂತು ನಿಮಗೆ ಎಂದು ಪಾಪದವನ ಕೊಲುವುದೇನು?
ಮೂಲದವನ ದೇಹದಲ್ಲಿ ಮೂಳೆಯಿಲ್ಲವೇನು?" ಎಂದ
ಮಾತು ನಾಟಿ ಮುಷ್ಟಿ ಸಡಿಲೆ, ಕಣ್ಣ ಕಿಸುರ ಲಜ್ಜೆಯೊರಸೆ,
ಮೋರೆಯೊಳಗೆ ಹುದುಗುತಿರುವ ಗೌರವಕ್ಕೆ ಧೈರ್ಯವಿತ್ತು
ರೋಷ ನಾಲಗೆಯಲಿ ನಿಂತು ಮೂದಲಿಸಿತು–"ಮೂಲದವಗೆ   ೭೦
ನೀರನೆರೆದ ಕೈಯ ತಡೆವ ಬೀರನಹೆಯೊ ಸೆಟ್ಟಿ ನೀನು?
ಆಳುಗಳನು ಕಾಂಬ ಬಗೆಯನೆಮಗೆ ಕಲಿಸಬಂದೆಯೇನು?
ಆದರಿರಲಿ, ಜೈನನಲ್ತೆ! ನಿನಗೆ ಕರುಣೆ ಮೀರಿ ಹರಿವು-

ದಾದರಿವನ ಬಿಡಿಸಿಕೊಂಡು ಮೂಳೆ ಮಾಂಸ ಬೆಳೆಸಬಹುದು;
ಖೂಳಹೊಲೆಯನಿವನ ಕಾಲನೊತ್ತಬಹುದು, ನಮಿಸಬಹುದು!
ಆದರೇನೊ ಸೆಟ್ಟಿ? ಹಣದ ಚೀಲವಿದೆಯೊ. ಹರಿದು ಹೋಯ್ತೊ?
ಮಾಡು ಸೋರಿ ಸೋರಿ ಮನೆಗೆ ನೀರು ತುಂಬಿ ತೇಲಿಹೋಯ್ತೊ?"
ಮೂದಲೆಗಳ ಕೊಳ್ಳಿ ಬಡತನವನು ಕಿದರೆ. ಕೆಂಡದಂತೆ
ಮಾನ ಕನಲೆ, ನುಡಿದ ಸೆಟ್ಟಿ:–"ಬಡವರಹುದು ನಾವು, ನಿಮ್ಮ
ಮೂರು ದಿನಕೆ ಬಾಳ್ವ ಬೀಡು ಭಾಗ್ಯವಿಲ್ಲ, ಬೇಡವೆಮಗೆ! ೮೦
ದೀನಸೇವೆ ದಿನದಿನಕ್ಕೆ ದೊರೆಯಲದುವೆ ಸಾಕು ನಮಗೆ!
ಆಗಲೇನು? ನಿಮ್ಮ ಬದುಕನಿದನು ಕೊಳ್ಳಿ! ಮೂಲದವನ
ಬೀಳುಗೊಡಿರಿ!" ಎನುತ ತನ್ನ ತಾಯಿ ಸೊಂಟಕಿಟ್ಟ ಹೊನ್ನ
ನೇವಳವನು ನೂಕಿ ಮುಂದಕೊಗೆಯಲಾಳ್ವ ಕೊಂಡು ನನುತ-
"ಧೀರ! ಕಲಿಯುಗಕ್ಕೆ ಬಾಹುಬಲಿಯೆ! ಮೆಚ್ಚದಿಹರೆ ನಿನಗೆ?
ಆದರಕಟ ಕುಡಿಯನಿದಕೆ ಸೋಲಲಾರ! ನಮ್ಮ ಸಾಲ
ಹೋಗಲಾರದಯ್ಯ! ಇದರ ಮೇಲೆ ಹತ್ತು ವರಹವಿತ್ತು
ಮೂಲದವನ ಬಿಡಿಸಿ ಪುಣ್ಯಮಾಡಬಾರದೇನು?" ಎನಲು-
"ಮೂಲದವನ ಶುಲ್ಕವನ್ನು ಕೇಳದಾವು ತೊಡವನಿತ್ತ
ಬಾಲಿಶತೆಗೆ ನಗುವಿರೇನು? ಮಾನವನಿಗೆ ಬೆಲೆಯ ಮಾಡೆ ೯೦
ಬಾಗಲಿಲ್ಲವಮ್ಮ ಮನವು; ನೀವು ಮನಕೆ ಬಂದ ಬೆಲೆಯ
ಹೇಳಬಹುದು; ಕೊಡುವುದಕ್ಕೆ ಜಾರುವವನೆ ಸೆಟ್ಟಿ? ತನ್ನ
ಮಾರಿಯಾದರಿವನ ಬಿಡಿಪ ಭಾವದವಗೆ ಹತ್ತು ವರಹ
ಹೇಳಿ ಬಡವನೆಂಬ ಕೃಪೆಯ ತೋರಿದುದಕೆ, ಸುಜನತೆಯನು
ಬೀರಿದುದಕೆ. ಋಣಿಗಳಾವು. ಆದರೊಂದು ಸಲುಗೆಯಿದನು
ಪಾಲಿಸುವಿರೆ? ಈಗ ಕೈಯೊಳಿಲ್ಲ, ಸುಗ್ಗಿ ಕೊಯ್ವ ಸಮಯ-
ಕೀವೆ, ಶಾಂತಿನಾಥನಾಣೆ!" ಎಂದ ಸೆಟ್ಟಿಗಾಳ್ವನೆಂದ-
"ಆಣೆಗೀಣೆ ಸಾಲದೆಮಗೆ! ಮಾತು ಗಾಳಿಯೊಂದು ಸುಳಿಯು.
ಕಾಸು ಮುಖಕೆ ಹಣೆಯದಣ್ಣ! ಬೀಸುತಿರುವೆ ನಾಲಗೆಯನು!"

ಬಡವನೆದೆಯ ಬೆಂಕಿಯೆಲ್ಲ ಒಡಲವಿವರಗಳಲಿ ಸೂಸೆ, ೧೦೦
ಸುಡುವ ಕಣ್ಣ ಕುಲುಮೆಯಲ್ಲಿ ಕರಗಿ ರೋಷ ಹರಿಯೆ, ಒಡೆದು
ಸಿಡಿಯುವಿಂದ್ರಿಯಗಳ ಬಲದಿ ನಿಲಿಸಿ ಸೆಟ್ಟಿ ನುಡಿದನವಗೆ,
ಹುರಿವ ಮಡಕೆಯಿಂದ ಅರಳ ತೆಗೆದು ಕೊಡುವ ತೆರದಲಿಂತು:–
"ಮಾತ ಹಳಿಯಬೇಡಿ! ಮನುಜನೊಂದು ಮಹಿಮೆ ಮಾತಿನಲ್ಲಿ
ಮಾತು ದೇವನೊಂದು ಶಕ್ತಿ, ಮಾತೆ ಜೀವನೊಂದು ಜ್ಯೋತಿ;
ಮಾತು ನೀತಿಗಳಿಗೆ ತಾಯಿ, ರೀತಿಗಳಿಗದೇ ವಿಧಾಯಿ;
ಮಾತು ಸತ್ಯವುಡುವ ಧೌತ, ಜೀವನದ ರಥಕ್ಕೆ ಸೂತ.
ಮಾತ ಕೆಡಿಸಿ ಸುಖಿಪೆನೆಂಬ ಪಾಪಿ ನರಕಕೂಪಭೇಕ.
ಸಾಕದಿರಲಿ, ಆಳ್ವರೇನ ಭಾವಿಸಿದಿರೊ? ಬಡವನಾಗೆ,
ಮಾತು ಬಡವೆ? ನೀತಿ ಬಡವೆ? ಧರ್ಮರಾಯಸೆಟ್ಟಿ ನುಡಿದ ೧೧೦
ಮಾತ ನುಂಗಿದುದನು ಕೇಳಿಯಾದರರಿವಿರೇನು? ನಾವು
ಹುಸಿವ ಮಾತ ಬಿಡಿರಿ, ನಮ್ಮ ಕೈಯ ತಿಳಿಯ ನೀರ ಕುಡಿದ
ಸೊಣಗನಾದರೇನು ನಂಬುಗೆಯನು ತಪ್ಪಿ ನಡೆವುದುಂಟೆ?"
ಸೆಟ್ಟಿ ನೊಂದು ನುಡಿದ ಸತ್ಯವಾಕ್ಯವೆದೆಯ ಕುತದಂತೆ
ಕುತ್ತುತಿರಲಸತ್ಯಪಂಕ ಚಿಮ್ಮಿದಂತೆ ಮೊಗವು ಕಪ್ಪ–
ನಪ್ಪೆ, ಗುಮ್ಮಣಾಳ್ವ ಕಿರಿದು ಹೊತ್ತು ಮೌನವಿದ್ದು, ತನ್ನ
ವಿತ್ತದಾಶೆ ಮಾನಭಂಗದಿಂದ ಮೊಗವನಿನಿತು ಬಾಗೆ
ಸತ್ಯಬಂಧನದಲೆ ಬಿಗಿದು ಸತ್ಯಮದವನಿಳಿಪೆನೆಂದು
ಚಿತ್ತದಲ್ಲಿ ಬಗೆದು ನುಡಿದನಿಂತು:- "ಸೆಟ್ಟಿ! ನಿನ್ನ ಮಾತು
ಒಪ್ಪವಿಟ್ಟ ಚಿನ್ನ, ತಲೆಯ ತೂಗಬೇಕು; ಅದರೊರೆದು ೧೨೦
ನೋಳ್ಪ ಬಯಕೆ ನಮಗೆ. ನಿನ್ನ ಹೆಸರಿಗಿಂತ ನಿನ್ನ ನಾಯ
ಕೀರ್ತಿಯೂರ ಹಬ್ಬಿರುವುದು, ಬಲ್ಲೆವಾವು. ಅದನು ನಮಗೆ
ಒತ್ತೆಯಿಟ್ಟು ಮಾತ ಸಲಿಸು! ಮೂಲದವನ ಬಿಟ್ಟೆ!" ಎಂದು
ಕಡ್ಡಿ ಮುರಿದು ನೆಲಕೆ ಬಿಸುಡೆ, ಕಾಲ್ಗೆ ನಾಟಿದೊಂದು ಮುಳ್ಳ
ಕಿತ್ತ ತೆರದಿ ವೇದನಾನುಭೂತಿ–ನಿರ್ವೃತಿಗಳು ಸೆಟ್ಟಿ-

ಗಾಯ್ತು ಚಂದುವಗಲಿಕೆಯಲಿ–ಕಂಡಿಯಗಾದ ಬಿಡುಗಡೆಯಲಿ.

ಇನಿತು ತಾಳಿ, ನಿಟ್ಟುಸಿರನು ಕಳೆದು, ಸೆಟ್ಟಿ ನುಡಿದ:- "ನುಡಿಯ
ರಭಸದಲ್ಲಿ ತೇಲಿದುದನು ಹಿಡಿದಿರಾದರೇನು ? ದೈವ
ತೆರೆದ ಪಥದಿ ನಡೆಯುವಾಗ ತಿರುಗಿ ನೋಳ್ಪರಲ್ಲ ನಾವು.
ಹಿಡಿಯಿರಿದಕೊ! ಅಡವನಿಟ್ಟೆ; ತಿಂಗಳವಧಿ ಬೆಳೆವುದಕ್ಕೆ; ೧೩೦
ಒಡನೆ ನಿಮ್ಮ ಋಣವ ಸಲಿಸಿ ಬಿಡಿಸಿಕೊಂಬೆನೆನ್ನ ಮನೆಯ
ಮಣಿಯ ಸೊಡರನಿದನು, ಜೀವರತುನ ಬೊಂಬೆಯಿದನು, ರೂಪು-
ವಡೆದ ಧೈರ್ಯವಿದನು, ತಾಳ್ಮೆಯೊಡಲನಿದನು, ಎನ್ನ ನುಡಿದ
ನುಡಿಗೆ ವಜ್ರಕವಚವಿದನು!" ಎನುತ ಬಳಿಕ ಚಂದುಗೆಂದ:–
"ಅಣುಗ ಬಾರೊ, ಬಂಟ! ಮನುಜಗಾದ ಪಶುತೆಯನ್ನು ನೀಗೆ
ಪಶುವೆ ನೀನೆ ನೋಂತೆ! ನಿನ್ನ ಅಡವನಿಟ್ಟೆನಾಳ್ವರಲ್ಲಿ.
ಬಿಡಿಸಿಕೊಂಬ ವರೆಗೆ ಅವರ ಪದವ ಬಿಡದೆ ಸೇವಿಸುವುದು;
ಅವರ ನುಡಿಯನೆನ್ನ ನುಡಿಯೆನುತ್ತ ನಡೆಸುತಿಹುದು, ಮರೆಯ
ದಿರಲೊ ಕಂದ! ಚಂದು!" ಎಂದು ನುಡಿಯೆ ಕಣ್ಣನೀರ ಬಿಂದು
ಜಗುಳೆ, ಸೆಟ್ಟಿ ಚಂದುವೊಡಲ ಪಿಡಿವ ಕೊನೆಯ ಸೊಗವನುಂಡು ೧೪೦
ಬಿಡಲು,–ಗುಮ್ಮಣಾಳ್ವ ಮನದಿ ಹಲವ ಕಟಕಟಿಸುತ, ಮೊಗದಿ
ಹುಲುನಗೆಯನು ಸಿಗಿದು, ನಾಯ ಬಳಿಗೆ ಕರೆಯೆ, – ಸನ್ನೆಗಳಲಿ
ಒಡೆಯನಂತರಂಗವರಿತು, ಪದದ ರಜವ ಮೂಸಿ ಮುಡಿದು,
ಸರಿದು ಆಳ್ವನೆಡೆಗೆ, ಕಲ್ಲ ನಟ್ಟ ತೆರದಿ ನಿಂದುದಾಗ.

ಬಳಿಕ ಸೆಟ್ಟಿ – "ಕುಡಿಯ! ನಿನ್ನ ಋಣವು ಹರಿದುಹೋಯ್ತು; ನಿನ್ನ
ಮನೆಗೆ ಹೋಗೊ! ಸೊಗವ ಹೇಳೊ! ಇಷ್ಟು ದಿವಸ ನಿನ್ನ ಬೆನ್ನ
ಬಿಸಿಗೆ ಕರಗಿದವಳ ಮೈಯ್ಯ ತಣಿಸೊ! ಮನಕೆ ಬಂದ ಕಡೆಯ
ಲರಸಿನಂತೆ ಬದುಕಿ ಬಾಳೊ ಹಲವು ಕಾಲ"! ಎಂದು ಮೈಯ್ಯ
ತಡವಿ ಹರಸೆ; ಹರ್ಷವಾರಿಗಳಲಿ ಸೆಟ್ಟಿಯಡಿಯ ನಾಂದಿ,
ಗದಗದಿಸುವ ಕಂಠದಿಂದ ಕುಡಿಯ ನುಡಿಯನುದುರಿಸಿದನು:- ೧೫೦
"ಕನಸೊ ನನಸೊ ಬಗೆಯಲಾರೆ, ಇರುಳೊ ಹಗಲೊ ಹೇಳಲಾರೆ,

ಬದುಕೊ ಸಾವೊ ತಿಳಿಯೆನಿದನು; ನರನೊ ದೇವರೇನೊ ಎಂದು
ಅರಿಯೆ ನಾನು ನಿಮ್ಮ; ಪದದ ಬಳಿಯ ಬಿಡೆನೆ"ನುತ್ತ ಕಾಲ
ಹಿಡಿಯೆ ಸೆಟ್ಟಿ - "ಬೇಡ! ನಿನ್ನ ತೆರದ ಬಡವನೊಬ್ಬ ನಾನು;
ಬರಲು ನಿನ್ನ ಒಡಲಿಗೇನ ಕೊಡಲಿ? ಅಕಟ! ಹೋಗು," ಎಂದು
ಕಳುಹೆ, ಕುಡಿಯನಾಳ್ವಗಿದುವೆ ಕೊನೆಯದೆಂದು ಅಂಜಲಿಯನು
ಬಿಗಿಯೆ, ಮುಸುಕುಮುಸುಕಿನೊಳಗಿನಿಂದ ನುಡಿದ ಹುಂಕೃತದಲಿ
ತಿಳಿದು ಆಳ್ವನೊಪ್ಪಿಗೆಯನು, ಮಗುಳೆ ಸೆಟ್ಟಿಗೆರಗಿ, ಅಂದೆ
ನಡೆದ ಮಡದಿ ಮಕ್ಕಳೊಡನೆ; ನೆರೆಯ ಊರೊಳೊಕ್ಕಲಾದ.

ಂ ಂ ಂ ಂ

ಚಂದು ಗುಮ್ಮಣಾಳ್ವನೊಡನೆ ಮೆಯ್ಯ ನೂಕಿ ನೂಕಿ ಮುಂದೆ ೧೬೦
ಮುಂದುವರಿಯುವುದನು ಬಿಟ್ಟ ಕಂಗಳಲ್ಲಿ ನೋಡಿ ನೋಡಿ
ನಿಂದ ಸೆಟ್ಟಿ. ರೂಪು ಮಾಸೆ ಕಣ್ಣು ಮಸುಕೆ, ಥಟ್ಟನೇನೊ
ಒಂದ ನೆನೆದು, ಗುಮ್ಮಣಾಳ್ವನೆಡೆಗೆ ಓಡಿ ನುಡಿದನಿಂತು:-
"ಆಳ್ವರೆನ್ನ ಬಿನ್ನಹವನು ಲಾಲಿಸುವಿರೆ? ಎಮ್ಮ ಚಂದು
ಹಾಲ ಕುಡಿದು ಹಾಸಿಗೆಯಲಿ ಬೆಳೆದ ಕಂದ; ಮೆಯ್ಗೆ ಕಡ್ಡಿ
ಸೋಂಕದಿರುವ ಸುಂದರಾಂಗ! ಸಾಕಿದೊಂದು ಮೋಹ ನಿಮ್ಮ
ಕಾಲ ಹಿಡಿದು ಬೇಡಿಸುವುದು; ಬೇನೆ ಬೇಸರಾಗದಂತೆ
ಕಾಯಬೇಕು ಕರುಣೆಯಿಟ್ಟು, ಬೇರೆ ಮಾತು ನಮ್ಮದಲ್ಲ!"

ಗುಮ್ಮಣಾಳ್ವ ಗಹಗಹಿಸುತ ಸೆಟ್ಟಿಗೆಂದ:- "ಲೋಕದಲ್ಲಿ
ನಿನ್ನದೊಂದೆ ನಾಯ ? ಕರುಣೆಯೆಲ್ಲ ನಿನ್ನ ಸೊತ್ತೆ ? ಮನುಜ- ೧೭೦
ರಲ್ಲವೇನೊ ನಾವು? ಬಾರಿಬಾರಿಗೆಮಗೆ ಬುದ್ಧಿ ಹೇಳ್ವ
ಬಲ್ಲತನವ ಸಾಕುಮಾಡೊ!" ಎನಲು ಸೆಟ್ಟಿ ಮನದ ಕಿಸುರ-
ನೆಲ್ಲನಲ್ಲೆ ಮುಚ್ಚಿ, ಸಮಯವಲ್ಲವೆಂದು ಬಾಯ ಮುಚ್ಚಿ
ತನ್ನ ಮನೆಯ ಹಾದಿ ಹಿಡಿದ : ಕಣ್ಣಿನಲ್ಲಿ ನೀರ ಹಿಡಿದ !

ಎದೆಯ ಗುಂಡಿಗೆಯನು ತೆಗೆದ ಬರಿಯ ದೇಹವಾಗಿ ಸೆಟ್ಟಿ
ತೆರಳೆ, ಬಾಳೆಯಿಂದ ಮುರಿದ ಮೋತೆಯಾಗಿ ಚಂದುವಿರಲು;

ಬಡವು ನಾಯ ಭಂಗಗೊಳಿಸಿ ಸೆಟ್ಟಿ ನುಡಿದ ಮಾತ ಕೆಡಿಸಿ
ಅವನ ಮನೆಯ ಸೂರೆಗೊಂಡು, ತನ್ನ ಮೀಸೆಗೊಂದು ಹುರಿಯ
ಹೆಚ್ಚಿಸುವುದಕೆಂದು, ತನ್ನ ದೇವಿ ಲೋಭವೆಂಬ ಮಾರಿ
ಮೆಚ್ಚುವಂತೆ ಬಲಿಯನೊಂದ ಕೊಚ್ಚಲೆಂದು, ಕಲ್ಮನದಲಿ ೧೮೦
ಮಸೆದು ಹಲವು ಹಂಹೆಕೆಗಳ ಹರ್ಷಗೊಂಡ ಗುಮ್ಮನಾಳ್ವ.

ಬಳಿಕ ನಾಯಿ ಬಂದ ಬವಣೆಗಳನು ಸಾಂಗವಾಗಿ ಬರೆಯೆ
ಒಸರದಣ್ಣ ಲೆಕ್ಕಣಿಕೆಯೆ! ಮನುಜನೆದೆಯ ಹುತ್ತದಲ್ಲಿ
ಹುದುಗಿ ಬಾಳ್ವ ಹಿಂಸೆಯೆಂಬ ಸರ್ಪಕೆಷ್ಟು ಹಲ್ಲೊ? ಅದರ
ವಿಷವಿಕಾರವೆಷ್ಟು ವಿಧವೊ! "ಹೊರಡು, ಹೊರಡೆ"ನುತ್ತ ಮಸೆದ
ಕಸೆಯ ಕೋಲ ಬಡಿಗಳಿಂದ ಹೊಲಿದ ಅಂಗಿಯಾಯ್ತು ಮೆಯ್ಯ
ತೊಗಲು, ಬಿಸಿಲ ಜಳಕೆ ಬಿಗಿದ ಸಂಕಲೆಯಲಿ ಬೆಂದು ಸುಲಿದ
ಕಳಿಲೆಯಾಯ್ತು ಕೊರಳು, ಅನ್ನವಿರದೆ ಜಾತರಾಗ್ನಿಗೊತ್ತು-
ತಿರುವ ತಿದಿಯದಾಯಿತಳ್ಳೆ; ಆದರೇನು? ತನ್ನ ಒಡೆಯ
ನುಡಿದ ಮಾತು ತೊಗಲಿನೊಡನೆ ಬಿರಿಯಲಿಲ್ಲ, ಬಿಸಿಲಿನಲ್ಲಿ ೧೯೦
ಒಣಗಲಿಲ್ಲ, ಹಸಿವಿನಲ್ಲಿ ಕರಗಲಿಲ್ಲ. ಆಳ್ವನಟ್ಟ-
ಲೋಡಿಯೋಡಿ ಮನೆಯ ಸುತ್ತುವರಿವುದಲ್ಲದೇನು ಮದಿಲ
ಹೊರಗೆ ಕಾಲಿಡುವುದೆ? ತೋಳ ಸರಿಗೆಯುದುರಿ ಬೀಳ್ವವರೆಗೆ
ಹೊಡೆಯೆ ಹೊರಳಿ ಮೇಟ್ಟಲಲ್ಲಿ ಅಳುವುದಲ್ಲದೇನು ಕಣ್ಣ
ಕೆದರಿಸುವುದೆ? ಅಗುಳನಿಡದೆ ದಿನವ ಹೋದರೇನು, ಒಡಲು
ಕರುಳ ಹಿಂಡಲೇನು, ಆಳ್ವ ಬಳಿಗೆ ಬರಲು ಬಾಲವಲುಗಿ
ಪದವ ಹಿಡಿವುದಲ್ಲ'ದೆಲ್ಲಿ ಹಸಿವ ಮಾರಲೆ'ಂದು ಹುಡುಕಿ
ನಡೆವುದೇನು ? – ನಾಯ ಸುಲಿವ ನರಕದಾಳ ಕೈಯ ತಡೆವ
ಸಲುಗೆ ಯಾರಿಗುಂಟು ? ಧೈರ್ಯವಾರಿಗುಂಟು ? ನೋಡಿ ನೋಡ-
ದಿರುವ ತೆರದಿ ನಡೆವುದೆಲ್ಲ ಬುದ್ಧಿಬೆಳೆದ ಮನೆಯ ಮಂದಿ. ೨೦೦
ಆಳುವ ಚೆಂದುವೆಡೆಗೆ ಬಂದು ಮಕ್ಕಳೆಲ್ಲ ಕಂಬನಿಯಲಿ
ತೊಳೆದುವವನು; ಗುಂಡನೆಂಬಣಿಗನೊಬ್ಬ ಕಸೆಯ ಕೋಲ

ಕಳವುಮಾಡಿ ತರಿದು ಹುಗಿದ; ಆಳ್ವನಿಲ್ಲದಿರುವ ವೇಳೆ
ಮನೆಯ ಕೆಲಸದವಳ ಮಗಳು ಮಡೆಲಲ್ಲಿದ್ದ ಕಡಲೆಗಳನು
ತುರುಕಿ ನಾಯ ಬಾಯಿಗೋಡಿ ಮದಿಲೊಳಡಗಿ ಕುಳಿತಳವಳು.

ಚಂದುಗಾದ ಭಂಗಗಳನು ಕಂಡು ಬೆಂದು ಹಗಲು ಮೂರು
ಸಂದು ಹೋಯ್ತು; ಬಳಿಕ ದೈವವಿಂದ್ರಜಾಲದಾಟವಾಡ-
ಲೆಂದು ರಂಗರಚನೆಗೈದು ಮುಂದೆ ಕರಿಯ ತೆರೆಯನಿಳಿಸಿ-
ದಂತೆ ಬಂತು ರಾತ್ರಿ, ಭಯವನೀವ ಶಿಶುವನುಣಿಪ ಧಾತ್ರಿ.

ಜಗದ ಭಾಗ್ಯವೆಂಬ ಪಣದ ಪಗಡೆಗಾಯ್ಗಳಂತೆ ಬಾನ- ೨೧೦
ದಗಲದಲ್ಲಿ ತಾರಗೆಗಳು ನಡೆಯುತಿರಲು; ಗುಮ್ಮಗಾಳ್ವ
ಒಡವರೆಲುಬಿನೊಟ್ಟಿಲಂತೆ ಭಯಗೊಳಿಸುವ ಹಣದ ರಾಶಿ
ಬಳಿಯೊಳಿರಲು ಗೃಹದ ಗರ್ಭದೊಳಗೆ ಗುಹೆಯೊಳಿರುವ ಹುಲಿಯ
ತೆರದೊಳೊರಗಿ, ಕನಸನೊಂದ ಕಾಣುತಿದ್ದ:– ತನ್ನ ಕೈಯ
ಹೊಡೆತದಲ್ಲಿ ಚಂದು ಸಾಯೆ, "ಕೊಡು ಕೊಡೆನ್ನ ನಾಯ ತೋರು!
ಸುಲಿದು ತಿಂದೆಯೆಲ್ಲಿ ಹೊಲೆಯ ?" ಎನುತ ಸೆಟ್ಟಿ, ತಾನದಾರ
ಮನೆಯನೆಲ್ಲ ಮಾರಿಸಿಪೆನೊ ಅವರ ಕೂಡಿ ಬಂದು, ತನ್ನ
ಹಿಡಿದು ಉರಿವ ಬಿಸಿಲಿನಲ್ಲಿ ಬಿಗಿದು ಕಟ್ಟಿ ಹೊಡೆಯುತಿರಲು,
ನರಳಿ ತಾನು 'ಅಯ್ಯೊ!' ಎಂದು ತೆರೆಯೆ ಬಾಯ ತುಳಿದು ಹಲ್ಲ
ಮುರಿದು, ತನ್ನದೊಂದೆ ಶಿಶುವನೆಳೆದು ತಂದು ತರಿದು ಬಾಯ್ಗೆ ೨೨೦
ತುರುಕಿ ಮಗುಳೆ ತುಳಿದು ಗಂಟಲೊಳಗೆ ಜಡಿಯೆ-ಮಿಡಿಯಲಾದೆ-
ನೆನುವ ಘೋರವಾದ ಕನಸ, ತನಗೆ ಮುನಿದ ತನ್ನ ಮನಸ,
ಸಹಿಸಲಾರದೆದ್ದು ಹಾರಿ ಚೀರಿ ಬೀಳೆ, ಹೊರಗಿನಿಂದ
ಬಹಳ ರವವು ಕಿವಿಯ ಸೀಳೆ, ಒಡನೆ ಓಡಲೆಳಸಿ ಬಾಗಿ-
ಲಿರುವ ತಾಣ ದೊರೆಯದಿರಲು ಮರುಳಿನಂತೆ ಮೊರೆದು ಕೂಗೆ,—
"ಅರರೆ ಬೆಂಕಿ! ಬೆಂಕಿ!! ಆಳ್ವರಾಳ್ವರೆ"ಂದು ಬೊಬ್ಬಿಡುತ್ತ
ಮನೆಯ ಮಂದಿ ಬಂದು ಬಾಗಿಲೊದೆದು ಮುರಿಯೆ, ಆಳ್ವನೆದೆಯೆ
ಧಗಧಗಿಸಿದ ತೆರದಿ ಮನೆಯ ಮುರಿದು ತಿಂಬ ಹವ್ಯವಾಹ-

ನುರುಕರಾಲನೇತ್ರಕಿರಣರಖುರಿಯೆ ಧುಮುಕೆ ಶಯನಗೃಹಕೆ,
ಕಡಿದ ಮರದ ತೆರದಿ ಗುಮ್ಮಣಾಳ್ವ ನೆಲವನೆರಗೆ, ಹೊತ್ತು      ೨೩೦
ಹೊರಗೆ ತಂದು ನೀರ ತಳಿಯೆ ತೆರೆದುದಾಗಲವನ ಕಣ್ಣು!
ಅಲ್ಲಿ ನಿಂದು ನೋಡಲೇನು! ಯಮನ ವರಿಸಲೆಂದು ಹೊರಟ
ಸಿರಿಯ ಸಿಂಗರಿಸಿದ ತೇರೋ! ಎನಲು ತೋರಿ, ಭೋರಿಡುತ್ತ
ಉರಿಯುತಲಿದೆ ಕುಣಿಯುತಲಿದೆ ಆಳ್ವನಾಳ್ವ ಬೀಡು! ಭಾಗ್ಯ
ಚೆದರಿದಂತೆ ಉದುರಿದಂತೆ, ಕೆದರುತಲಿದೆ ಕೆಂಡ, ಜಗುಳು-
ತಲಿದೆ ಬೂದಿ; ನೋಳ್ಪ ಕಣ್ಣನೊಡೆಯುವಂತೆ, ಮನೆಯ ಗಂಟ-
ಲೊಡೆಯುವಂತೆ ಒಡೆಯುತಲಿದೆ ಮಾಡ ಬಿದಿರ ಗಂಟು; ಬದುಕ
ನುಳಿಸೆ ಧಾವಿಸುವರ ತೋಳೆ ಮುರಿಯುವಂತೆ ಮುರಿಯುತಲಿದೆ
ಮನೆಯ ತೋಳು, 'ಗುಮ್ಮಣಾಳ್ವ! ಬಳಿಗೆ ಬಾರೊ! ಸಿರಿಯಃ ಕರುಳ
ಸವಿಯ ನೋಡೊ!' ಎಂದು ಬೆಂಕಿ ನಗುವ ತೆರದಿ ಉಗಿವ ತೆರದಿ      ೨೪೦
ಕರವ ನೀಡಿ ಕರೆವ ತೆರದಿ ನೆಗೆಯುತಿತ್ತು, ಭುಗಿಲುತಿತ್ತು!
—ಚಾವಡಿಯಲಿ 'ಮಲ್ಲರಾಯಭೂತ'ಕೊಪ್ಪಿಸಿದ್ದ ಹಳೆಯ
ತೂಗುಮಂಚವಿತ್ತು, ಅದಕ್ಕೆ ಎಂದಿನಂತೆ ಸಂಜೆಯಲ್ಲಿ
ಆಳ್ವತಾನೆ ದೀಪವಿಟ್ಟು ಕೈಯ ಜೋಡಿಸಿದ್ದನದರ
ಜೋತಿಯೇ ನಿಮಿತ್ತವಾಗಿ ಭೋಂಕನೆದ್ದುದಲ್ಲಿ ದೈವ–
ದಾಟದಾರಭಟೆಯ ವಹ್ನಿ. ಭೂತಭಯದಿ ಚಾವಡಿಯಲಿ
ಅವ ಗಂಡನಾದರಲಿ ಮಲಗನಿದ್ದುದೊಂದೆ ಚಂದು,
ಹಿರುವವನ ಹಾರಯಿಸುತ ನೀರ ಗಿಂಡಿ ಕಾದಿಹಂತೆ.
ಕಾಣುತೆದ್ದ ಕಿಚ್ಚು ಚಂಟ ಘೋರರವದಿ ಮೊರೆದುದಾದ-
ರೇನು? ಗಾಢನಿದ್ರೆಯಲ್ಲಿ ಗೂಢವಾದ ಮನೆಯ ಮಂದಿ      ೨೫೦
ಕೇಳಲಿಲ್ಲ, ಕೇಳಿದವರು ಏಳಲಿಲ್ಲ ನಾಯಿಗೇನೊ
ರೋಗವೆಂದು. ಬಳಿಕ ಚಂದು ಮನೆಯ ಬಳಸಿ ಕಿಟಕಿಗಳಿಗೆ
ಹಾರಿ ಹಾರಿ ಗರ್ಜಿಸಲ್ಕೆ,– "ಹಾಳು ನಾಯಿ ಕೊಲ್ವೆನೆ"ಂದು
ಖೂಳ ಮುದುಕನೊಬ್ಬ ಬಡಿಗೆಗೊಂಡು ಬಾಗಿಲನ್ನು ತೆರೆದು

ಕಂಡಂ ಬೆಚ್ಚಿ "ಬೆಂಕಿ!" ಎಂದು ಹಾರಿ ಕೂಗೆ ಎಲ್ಲರೆದ್ದು
ಓಡೆ ಹೊರಗೆ; ಆಳ್ವ ಕಾಣದಿರಲು ತಂದರವನ. ಈಗ .
ತಾನದಾರ ದೂರಲಹುದು? ತನ್ನ ಕೈಯೆ ತನ್ನ ತನುವ
ಹೊಳಿತೆಂದು ಹಣೆಯ ಮೇಲೆ ಕೈಯ ಹೊಡೆದುಕೊಂಡನಾಳ್ವ!

ಮನೆಯುನಪ್ಪಿ ಮದದ ಬೆಂಕಿ ಮದಿಲ ಮುದ್ದಿಸಿತ್ತು; ಆಳ್ವ
ಸೆರೆಯಲಿಟ್ಟ ಸಿರಿಯ ಜುಟ್ಟು ಆದರ ಹಿಡಿಕೆಯಲ್ಲಿ ಇತ್ತು ೨೭೦
ಎಳೆದು ತರುವ ಹೊಂತಗಾರನಾರೊ? ಬದುಕಿನಾಸೆ ತೊರೆದು
ಬದುಕುವಾಸೆವಿಡಿದು ಮದಿಲ ಬಾಗಿಲಿನಿಂದ ನುಸಳಿ ಹೊರಗೆ
ನಡೆದುದೆಲ್ಲ ಬಲದ ಚಲವ ಮಂದಿಯೇನಲು, ಅಬಲೆಯರಿಗೆ
ಸಿರಿಯ ಹಂಗೆ? ಕೈಗೆ ಬಂದ ಹಸುಳೆಗಳನು ಹಿಡಿದುಕೊಂಡು,
'ಯಮುನ ಉಕ್ಕಡವನು ದಾಟಿ ನೆಲದ ನೀರ ಋಣದಿ ಬಂದೆ'—
ವೆನುತ ಸತಿಯರೆಲ್ಲ ಮಜಲುಗದ್ದೆಯಲ್ಲಿ ಗುಂಪುಗೂಡೆ—
ಬಳಿಗೆ ಆಳ್ವ ಬಂದು— "ಮನೆಯ ಜನವದೆಲ್ಲ ಬಂತೊ? ನಿಮ್ಮ
ಶಿಶುಗಳೆಲ್ಲ ಬಳಿಯೊಳಿರುವುವೇನು? ನಮ್ಮ ಕಣ್ಣ ಬೊಂಬೆ
ಕಮಲೆಯೆಲ್ಲಿ?" ಎಂದ ಮಾತು ಎಲ್ಲರೆದೆಯನೇಕಸಮಯ-
ದಲ್ಲಿ ಬಗಿದು ಹೋಗಲು, ಆಳ್ವನರಸಿ - "ಪೊನ್ನಿ, ಪೊನ್ನಿ! ತರಲೆ
ಇಲ್ಲವೇನೆ ಮಗುವ ನೀನು? ಅಯ್ಯೊ! ಪಡುವ ಸಾಲೆಯಲ್ಲೆ
ಎನ್ನ ಚಿನ್ನವುಳಿಯಿತಯ್ಯೊ! ಎನ್ನ ಜೀವವೇಕೆ ಹೋಗ-
ದಯ್ಯೊ? ಪೊನ್ನಿ, ಎನ್ನ ಪೂರ್ವಕರ್ಮ ದಾದಿಯಾಗಿ ನಿನ್ನ
ನಮ್ಮ ಮನೆಗೆ ತಂದಿತಯ್ಯೊ! ಹೆತ್ತು ಹೆತ್ತು ಸತ್ತು ಉಳಿದ
ಬಿತ್ತು ಬೆಂದಿತಯ್ಯೊ! ಸುಟ್ಟ ಸಿರಿಯ ನಂಬಿ ಮಾಸನೆನ್ನ
ಕೊಟ್ಟು ಬೀಡುಮನೆಯಿದೆಂದು ಕೊಂದನಯ್ಯೊ!" ಎಂದು ಜೀವ
ದಕ್ಕಿಸಲ್ಕೆ ಓಡುವಾಗ ಮಗಳ ಮರೆದು ಬಂದ ತಪ್ಪ
ಸಿಕ್ಕಿದವರಿಗೆಲ್ಲ ಹಂಚಿ ಸತಿಯರೆಲ್ಲ ರುದಿತದಲ್ಲಿ
ಕುಳ್ಕುದಿಯುವಗುಳ್ಗಳಾಗೆ; ಗುಮ್ಮಣಾಳ್ವ - ಕಂಡ ಕನಸೆ
ಮುಂದೆ ಬಂದು ನಿಂದಿರಲ್ಕೆ ಗರ್ವಧಾತುವೆಲ್ಲ ಕರಗಿ ೨೮೦

ಕಣ್ಣಿನಲ್ಲಿ ಸೋರೆ, ಹೆರರ ಹೀರಿ ಬೆಳೆದ ಕೊಬ್ಬು ಹೊಟ್ಟೆ-
ಯುರಿದ ಬೆಂಕಿಗಾರೆ, ಕಿರಿಯ ಹಸುಳೆಯಂತೆ ರೋದಿಸಿದನು:—
"ಫಲಿಸಿತೆನ್ನ ಪಾಪ! ಬಡವನೆಳೆಯ ಮಕ್ಕಳುಂಬ ತುತ್ತ-
ನೆಳೆದ ಶಾಪ! ರಮಣ ಬರುವ ಪಥವ ಕಾದು ಹಸಿದು ಕುಳಿತ
ಸತಿಯ ಕಿವಿಗೆ ಸೀಸವೆರೆದು ಕೊರಳ ತಾಳಿಗಡಿದ ತಾಪ!"
ಎನುತ ಸುರಿದ ಹಸುಬೆಯಂತೆ ಕುಸಿದು ಬೀಳೆ, ಆಳ್ವನರಸಿ
"ಬದುಕಲಾರೆ! ಮಗಳನುಂಡ ಬೆಂಕಿಗೆನ್ನ ಮುಡಿಪೆನೆ"ನುತ-
ಲೋಡೆ, ಕೆಲಬರೆಳೆದು ತಡೆದು ಹಿಡಿದು ನಿಲಿಸೆ; ಕೆಲಬರಾಗ
ಕೂಸ ತರುವೆವೆಂಬ ಮನಸು ಮೀರಿ ಮುಂದೆ ಸಾರೆ, ಬೆಂಕಿ
ಹಾರಲೊಡನೆ ಕಾಲು ಹಿಂದೆ ಜಾರೆ ನಡುಗಿ ನಿಂತರಲ್ಲೆ! ೨೯೦

ಕೆಂಡದೊಳಗಿದೊಂದು ಮಸಿಯ ಖಂಡವೇನೊ? ಎಂದು ನೋಳ್ಪ
ಗಂಡರೆಲ್ಲ ಕಣ್ಣ ಬಿಡಲು, ಬಾಗಿಲಿಂದ ದುಮುಕಿತಾಗ!
ಕಂಡು "ಆಹ" ಎಂದು ವಹ್ನಿಘೋಷವಡಗುವಂತೆ ಬೆರಗು-
ಗೊಂಡು ಬೊಬ್ಬಿರಿದರು. ಆಳ್ವನೆದ್ದಿದೇನಿವೇನೆನುತ್ತ
ಮುಂದಕೋಡೆ—ಬಾಯ ತೆರೆದ ಸಿಂಹದೊಡಲ ಹೊಕ್ಕು ಕವಳ-
ಗೊಂಡ ಹರಿಣ ಶಿಶುವನೆಳೆದು ತಂದುದೇನು? ಮತ್ಸ್ಯ ಮುಡಿದ
ಕೆಂಡ ಸಂಪಗೆಯನು ಶಿಖೆಯ ಸುಲಿದು, ತಂದುದೇನು? ಎಂಬ
ಚಂಡತೆಯನು ಸೂರೆಗೊಂಡು, ಇಕ್ಕೆಳಲ್ಲಿ ಅಮುಕಿ ಅಗ್ನಿ
ಕುಂಡದಿಂದ ಕುಂದಣದಲಿ ಸಮೆದ ಬೊಂಬೆಯೊಂದ ತಂದ
ಚಂದದಲ್ಲಿ ಹಿಡಿದು ದೀರ್ಘತುಂಡದಲ್ಲಿ, ಹೂವಿನೊಂದು ೩೦೦
ಮಂಜರಿಯಲಿ ಚಿಗುರಿನಂತೆ ರಸನೆಯೊಪ್ಪಿ, ಸೊಬಗನಪ್ಪೆ,
ಚಂದು ಶಿಶುವ ತಂದು, ತನ್ನ ಜೀವೆನಕ್ಕೆ ಕಲಶವಿಟ್ಟೆ
ಅಂದದಲ್ಲಿ ಆಳ್ವನಡಿಯ ಬಳಿಯಲಿಟ್ಟು ನಿಂದುದಾಗ.

ಮೊಟ್ಟೆಯೊಡೆದು ಹೊರಗೆ ಬಂದ ಗಿಳಿಯ ಮರಿಯ ತೆರದಿ ನಲಿವ
ಪುಟ್ಟುಕೂಸ ಪಡೆದು ಕೊಂಡು ಕೊನೆಯರಾರೊ? ದೈವ ಮಡಿಲೊ-
ಳಿಟ್ಟ ತೆರದಿ ಮಗುವ ತಂದು ಕೊಟ್ಟ ನಾಯನಪ್ಪಿ ಬೆನ್ನ

ತಟ್ಟದವರದಾರೊ? ಕಟ್ಟಿ ಹೊಡೆದ ಕುರುಡರಿಂಗೆ ಕಣ್ಣ
ಕೊಟ್ಟು, ಸೇವೆಗೊಂದು ಮೇಲುಮಟ್ಟವಿಟ್ಟ ಗುಣವ ಮನದ
ತೊಟ್ಟಿಲಲ್ಲಿ ತೂಗಿ ಹಾಡದಿರುವರಾರೊ? ಕೊಬ್ಬಿ ಬೆಳೆದ
ಮಲ್ಲರೆಲ್ಲ ಸೊಂಟದಲ್ಲಿ ಕೈಯನಿಟ್ಟು ಕಣ್ಣ ಬಿಟ್ಟು ೩೧೦
ಹಲ್ಲ ಕಿರಿಯುವಾಗ, ಬೆಂಕಿಯಲ್ಲಿ ಬೇಟೆಯಾಡಿ ಗೆಲವ
ತಂದ ಪಶುವಿನೊಂದು ಶೌರ್ಯಕಾರೊ ಮೆಚ್ಚದಿಹರು? ಬೆರಳ-
ನಾರೊ ಕಚ್ಚದಿಹರು? ಮನುಜರೆಂಬ ಹೆಮ್ಮೆ ಮುಚ್ಚದಿಹರು?
ಬೀಡು ಬೂದಿಯಾಯ್ತು, ಎದೆಯು ಕಾಡದೆಲ್ಲ ಹೊತ್ತಿ ಹೊಯ್ತು;
ತಾನು ಜೀವಹಿಡಿದೊಂದು ನಾಯಿ ತನಗೆ ಜೀವಮಣಿಯು
ದಾನಮಾಡೆ ದೀನನಾದನಾಳ್ವ; ತನ್ನ ಪಶುತೆಗಾಗಿ
ಬೇಯುತೆಂದ:- "ಚಂದು! ನೀನು ನಾಯಿಯಲ್ಲ, ದೇವಲೋಕ-
ಭೋಗಿ! ಆವ ಜನ್ಮದೇನೊ ಪಾಪಲೇಶಕಾಗಿ ಶಾಪ
ಭಾಗಿಯಾದೆ! ಬವಣೆಗೊಳಿಸಿದುದಕೆ ನಿನ್ನ ಬಂಡಿಯೆಳೆವ
ಹೋರಿಯಾಗಿ ಹುಟ್ಟದಿಹೆನೆ? ಪಾದರಕ್ಷೆಯಾಗದಿಹೆನೆ? ೩೨೦
ಆದರಘವು ಮುಗಿಯಲುಂಟೆ? ನಿನ್ನ ಮನೆಯ ಮೆಟ್ಟಿಲಾಗಿ
ನೂರು ವರ್ಷವಿದ್ದರೇನು, ಪಡೆದ ಋಣವ ಸಲಿಸಲುಂಟೆ?
ಬಾರೊ, ಚಂದು! ನಿನ್ನ ಮೂಲದಾಳು ಗುಮ್ಮಣಾಳ್ವನಿಂದು!
ಹೀನನೆಂದು ತೊಲಗಬೇಡ! ಬಾರೊ, ಬಾರೊ!" ಎಂದು ತನ್ನ
ತೋಳನಗಲಿಸುತ್ತ ಮುಂದೆ ಸಾರಿ ತಬ್ಬಿಕೊಂಡನೆದೆಗೆ;
ಮೀರಿ ಹರಿವ ಬಾಷ್ಪದಲ್ಲಿ ತೋಯಿಸಿದನು ಮೆಯ್ಯನೆಲ್ಲ
ತಮವ ಕಳೆದು ರವಿಯ ಕಾಂಬ ಕುತುಕದಿಂದ ರಾತ್ರಿ ಮೊಗದಿ
ಬೆಳಗ ತಳೆದು ಬೇಗ ಬೇಗ ನಡೆಯಿತಾಗ: ಕೆಂಡವಾಗಿ
ನಭಕೆ ನೆಗೆದು ಸುಡುವ ಕಿರಣಗಳನು ಸುರಿದ ಸೂರ್ಯ, ಇಂತು
ತೊಡಗೆ ಲೋಕಲೀಲೆ, ಗುಮ್ಮಣಾಳ್ವ ನಾಯ್ಗೆ ಕಂಪಿನೆಣ್ಣೆ- ೩೩೦
ತರಿಸಿ ತಾನೆ ತೊಡೆದು ಮುಟ್ಟಿ ಮಿಾಯಿಸಿದನು; ರಕ್ತಚಂದ-
ನವನು ಗಾಯಗಳಿಗೆ ಲೇಪಿಸಿದನು; ಬಳಿಕ ಮುದ್ದು ಮಗಳ

ಕೊರಳ ಮುತ್ತಿನೆಕ್ಕಸರವ ತೆಗೆದು ಚಂದುಗಿಕ್ಕಿ, ತನ್ನ
ಅರಸಿ ತಾನೆ ಕರೆದ ನೊರೆಯ ಹಾಲ ಕುಡಿಸಿ, ಮಡಿಲ ಮೇಲೆ
ಮಲಗಿಸುತ್ತ ಮಯ್ಯ ಸವರಿ, ದಯೆಯ ಸುಖದ ಮೊದಲ ತುತ್ತ
ಸವಿದು, ತನ್ನ ಪಾಪಕಾಗಿ ಕುದಿವ ಮನವ ಕಣ್ಣಿನಲ್ಲಿ
ಮೊಗೆದು ಮೊಗೆದು ಚೆಲ್ಲಿ ನುಡಿವ ಕೊರಳು ಕುಗ್ಗಿ ನುಡಿಗಳುಗ್ಗಿ:—
"ಎನ್ನ ಧನಿಯೆ! ನಿನ್ನ ಧನಿಯ ಮಾತು ಸತ್ಯವಾಯ್ತು; ಎನ್ನ
ಸಾಲ ಬಡ್ಡಿಗೂಡಿ ಪೂರ್ಣ ಬಂದುಹೋಯ್ತು. ಹೊನ್ನಿನಾಸೆ,
ಪಂತ ಮೇಲೆ ನೆಗೆಯಿಪಾಸೆ, ಕೊಂದು ತಿಂಬ ವೇಳೆಯಲ್ಲಿ ೩೪೦
ಧರ್ಮರಾಯನವನ ಜುಟ್ಟು ಹಿಡಿದು ತಂಡೆನೆಂದು ತಂದೆ
ನಿನ್ನ; ಕಾಮಧೇನುವಿಂದಲೆಳೆಯ ಕರುವ ಬಿಡಿಸಿ ನಾಕ-
ದಿಂದ ನರಕಕೆಳೆದು ತಂದ ತೆರದಿ, ತಂದೆ, ಕಷ್ಟ ಕೊಟ್ಟೆ.
ಮದದಿ ಮುಚ್ಚಿದೆನ್ನ ಕಣ್ಣ ರೆಪ್ಪೆ ಸುಟ್ಟು ತೆರೆಯಿತೀಗ;
ತಿಳಿಯಬಲ್ಲೆನೀಗ ನಿನ್ನ ಕಳೆದುಕೊಂಡ ಪುತ್ರಹೀನ-
ನೆದೆಯ ಹುಣ್ಣಿನುರಿಯ, ಅವನ ನೆಳಲ ಹಂದರಲ್ಲಿ, ಇಲ್ಲಿ
ಪಡೆದ ತಾಪಗಳನು ಮರೆದು, ನಲಿದು ಬಾಳು ಪುಣ್ಯಜೀವಿ!
ಸುಖದಿ ಹೋಗು, ಕುಣಿದು ಕುಣಿದು ನಡೆದು ಹೋಗು! ನಿನ್ನ ಹಿಂದೆ
ಬರುವ ಬಯಕೆಯುಕ್ಕಿಯುಕ್ಕಿ ಬರುವುದಾದರೇನು? ಸುಟ್ಟ
ಮೊಗವ ತೋರಲಾರೆನವಗೆ! ಒಂಟಿಯಾಗಿ ಹೋಗು,ಬೆನ್ನ— ೩೫೦
ನಂಟಲೇಕಿದೊಂದು ಭೂತ ನಿನ್ನನಿನ್ನು? ಕುಲದ ಕುಡಿಯ
ಹೆಣ್ಣುಮಗಳನುಳಿಸಿ ಕೊಟ್ಟ ಚಿನ್ನ! ಹೋಗು, ಎನ್ನ ಎದೆಯ
ಕಲ್ಲಕೋಟೆಯೊಡೆದು ಗೆದ್ದ ವೀರ! ಹೋಗು," ಎಂದು ಹಲವು
ಸೊಲ್ಲ ನುಡಿದು ಸನ್ನೆಗೆಯ್ಯೆ—ಚಂದುಮಗಲದಿತ್ತು. ಬಾಲ-
ವೊಂದು ಅಲುಗುತ್ತಿತ್ತು, ಕಂಡು ಗುಮ್ಮಣಾಳ್ವ ನಾಯ ಮನದ
ಶಂಕೆಗೆಂದು, ಓಲೆಕಂಟ ದೊರೆಯದಿರಲು, ಉಟ್ಟ ಜರಿಯ
ಬಟ್ಟೆಯನ್ನೆ ಹರಿದು,—ಬೆಂಕಿಮುಕ್ಕುವಾಗ ಮಗಳ ತಂದು
ಕೊಟ್ಟು, ಹರಸಿದುದಕೆ ಸೇವೆಯೆಂದು ಅಡುವ ಬಿಟ್ಟು ಕಳುಹಿ

ಕೊಟ್ಟೆನೆ"ಂದು, ಮಡದಿ ಕೊರಳ ಸರದ ಕರಡಿಗೆಯಲ್ಲಿ ತುಂಬಿ-
ಗೊಂಡ ಕಾಡಿಗೆಯಲಿ ಬೆಳ್ಳಿ ಹಲ್ಲುಕಡ್ಡಿಯಿಂದ ಬರೆದು, ೩೭೦
ಚೆಂದುಗಿಟ್ಟ ಸರಕೆ ಸುತ್ತಿ, ಬೆನ್ನ ತಟ್ಟಿ-ನಾಲ್ಕು ಹಜ್ಜೆ
ಮುಂದೆ ತೆಗೆದು ಕೊರಳ ಹಿಂದೆ ಕೊಂಕಿಸುತ್ತ ನಿಂತು ನೋಡೆ,
"ಏನು ನಿಂತೆ ಚೆಂದು? ಅಯ್ಯೊ! ಮೂಢ ನಾನು ಮರೆತೆ, ಧನಿಯ
ನೇವಳವನು ಕೊಟ್ಟುದಿಲ್ಲ; ಕೊಡುವುದೆಂತೊ? ಸುಟ್ಟು ತಿಂದೆ!
ಈಗಲೇನೆ ಕೊಡಲಿ ಕಂದ? ಮನ್ನಿಸೆನ್ನನಿದನು ಕೊಂಡು
ಹೋಗೆೊ!" ಎನುತ ಸೊಂಟದಿಂದ ರನ್ನವಿಟ್ಟ ನೇವಳವನು
ಅಳ್ವ ಕೊಡಲು, ಧನಿಯದೆಂದೆ ಭಾವಿಸಿತ್ತೊ, ಏನೊ! ನೆಗೆದು
ಬಾಯೊಳದನು ಹಿಡಿದುಕೊಂಡು ಕುಣಿಯುತೋಡಿ ಮಾಯವಾಯ್ತು.

ದೈವ! ನಿನ್ನ ಮನದ ಮೋಡಿ ಬಹುವಿಚಿತ್ರವಲ್ತೆ! ಒಮ್ಮೆ
ಹೂವಿನಂತೆ ನಗುವೆ, ಒಮ್ಮೆ ಹಾವಿನಂತೆ ಆಗಿವೆ; ಧರ್ಮ- ೩೭೦
ಭೀರುವೆಂದು ತೋರಿಸುತ್ತ ದಾರಿ ಕೊಡುವೆಯೊಮ್ಮೆ, ಒಮ್ಮೆ
ನೀರನಂತೆ ಬಳಿಗೆ ಬಂದು ಜೊರಿಯಿಡುವೆ ಎದೆಯೊಳಕ್ಕೆ!

೦ ೦ ೦ ೦

ಕೊಂಬು ಮುರಿದ ಗಂಡಮೃಗವೊ ಎಂಬ ತೆರದಿ ಸೆಟ್ಟಿಯಿದ್ದ.
ಕಂಡಿತೆಲ್ಲ ಕಾಡಿನಂತೆ; ಕೊಂಡ ಕೊಳ ಸುಣ್ಣದಂತೆ.
ಪದ್ಮವತಿಯ ಬಾಯ್ಗೆ ಬೀಗ, ಕಣ್ಗೆ ಮುಸಕು, ಮನಕೆ ಮುಸಕು;
ಸದ್ದು ಇಲ್ಲ ಗಾಳಿಯಲ್ಲಿ, ಮುದ್ದು ಇಲ್ಲ ಹೂಗಳಲ್ಲಿ;
ಕುಂಕುಮಕ್ಕೆ ಬಣ್ಣವಿಲ್ಲ, ಕನ್ನಡಿಯಲಿ ಕಾಂತಿಯಿಲ್ಲ,
ತಂಬುಲಕ್ಕೆ ರಸವೆ ಇಲ್ಲ. ಕಂಕಣಕ್ಕೆ ದನಿಯೆ ಇಲ್ಲ.
ಹಗಲನೆಲ್ಲ ಜಗುಲಿಯಲ್ಲೆ, ಇರುಳನೆಲ್ಲ ಕಣ್ಣನಲ್ಲೆ
ಕಳೆದರಿಂತು ಮೂರು ದಿವಸ. ಸೆಟ್ಟಿಯೊಮ್ಮೆಯೊಮ್ಮೆ ಮನದ ೩೮೦
ಕಟ್ಟೆ ಸಡಿಲಿಸುವನು,-'ಎಷ್ಟು ಮಂದಿ ಕರ್ಮಭೂಮಿಯಲ್ಲಿ
ಇಷ್ಟಜನವಿಯೋಗದಿಂದ ದುಃಖಿಸುವರೊ! ನಮ್ಮದೊಂದು

ಪುಟ್ಟ ನಾಯಿ ನಾಲ್ಕು ದಿನಕೆ ಮನೆಯಲ್ಲಿಲ್ಲದಿರಲು ಬೆಸ-
ರಿಪ್ಪದೇಕೊ? ತಿಂಗಳಾಗೆ ಬಿಡಿಸೆನೇನು? ಅಗಸೆಹೂವಿ-
ನಂತೆ ಬಾಯ ತೆರೆದು ಚಂದು ಮನೆಗೆ ಬಾರದೇನು? ಮಾನ
ಭಂಗವಾಗದಂತೆ ಕಾದ ಬಂಟಗಿಟ್ಟು ಬೆಳ್ಳಿಪಟ್ಟಿ
ಸಿಂಗರಿಸದೆ ಇರುವೆನೇನು?' ಎಂಬ; ಆಳ್ವನುರಿವುಸುಡಿನ
ಭಂಗಿಯುದೆಯ ಕಲಕೆ,–'ಆಕಟ! ಚಂದು, ನಿನ್ನ ಕಟುಕಗಿತ್ತು
ಎನ್ನ ಮಾನವುಳಿಸಿಕೊಂಡೆ, ನಂಬಿದವನ ಕೊರಳ ಕೊಂಡೆ!'
ಎಂದು ತನ್ನ ಹಳಿದುಕೊಳ್ವ: ಧರ್ಮದೃಷ್ಟಿ ಬುದ್ಧಿಯಲ್ಲಿ  ೩೯೦
ಬಿಂಬಿಸಲ್ಕೆ,-'ಬಂಟ! ಪರಹಿತಕ್ಕೆ ತಲೆಯ ಮುಡಿಪನಿಟ್ಟ,
ಧರ್ಮರಥಕೆ ಕೈಯ ಕೊಟ್ಟ, ಮಾನಮಂಟಪಕ್ಕೆ ತನುವ
ಕಂಬನಟ್ಟ ಸೆಟ್ಟಿ ನಿನ್ನ ಗೆಳೆಯನಾಗೆ, ಕಷ್ಟ ನಿನ್ನ
ಬೆನ್ನ ಬಿಡುವುದೇನು? ತಾಳು! ತಾಳ್ಮೆಯೊಂದೆ ಜಗವ ಗೆಲ್ವ
ಅಂಬು ಬೇಡದಿರುವ ಬಿಲ್ಲು; ಧೈರ್ಯವದಕೆ ಹೆದೆಯ ತೊಗಲು.
ಬಂದ ಸಂಕಟಗಳ ಹರಿದು ತಿಂದು ಬದುಕು! ಬೇಸರನ್ನೆ
ಆಸರಿಂಗೆ ಕುಡಿದು ಬದುಕು! ಬಿಡಿಸಿಕೊಂಬ ವರೆಗೆ ಹಿಂದೆ
ತಿರುಗಿ ನೋಡಬೇಡ, ನಮ್ಮ ನೆನೆಯಬೇಡ; ಆಳ್ವ ನಿನ್ನ
ಕೊಂದರೇನು? ಕದಲಬೇಡ; ತಿಂದರೇನು? ಮಲೆಯಬೇಡ.
ಸತ್ಯಕಾಗಿ ಸಾಯೆ ಕರ್ಮ ಸತ್ತುಹೋಗದೇನು? ಪಶುತೆ  ೪೦೦
ಹೊತ್ತಿ ಹೋಗದೇನು? ಪುಷ್ಪಕದಲಿ ಮೇಲಕೆತ್ತರೇನು?
ಸತ್ಯಪಂಥ ಮೆರೆಯದೇನು?-ನರನಿದೆಂಬ ನಾಯಿದೆಂಬ
ಕೃತ್ರಿಮಗಳು ದೇಹಕಲ್ಲವೇನು?' ಎಂದು ಜಗ್ಗನೇಳ್ವ.

೦ ೦ ೦ ೦

ನಿದ್ದೆಯಿಲ್ಲದಿರುಳ ನೂಕಿ, ಮೂಡ ಕೆಂಪ ಹೊದ್ದ ಜೊಂಪು
ಮುದ್ದಿಸಿದ ಕಣ್ಣ ಸೆಟ್ಟಿ ತೆರೆಯೆ ಕೆಂಕವಾಗಿ, ಭಾನು-
ವೆದ್ದು ಮೇಲೆ ಸುಡುತಲಿದ್ದ. "ಎಚ್ಚರಿಸಲೆ ಇಲ್ಲವೇಕೆ?"-

ನುತ್ತ ಸತಿಯು ಗಜರುತೆದ್ದು. ಮನೆಯ ಬಾಗಿಲಲ್ಲಿ ಕಲ್ಲ-
ನಿಕ್ಕಿದಂತೆ ಕೈಯ ಕಟ್ಟಿ ನಿಂದು–'ಮಾತ ಸಲಿಸುವಲ್ಲಿ
ಮಿಯ್ಯ ನೋಡದವಗೆ. ಸಿರಿಯ ದೂಡುವವಗೆ, ನನಗಿದೊಂದು
ಕುನ್ನಿಯಲ್ಲಿ ಮೋಹವೇಕೊ?' ಎನುತ ಮನದ ಮೋಡದಲ್ಲಿ ೪೧೦
ಮಿಂಚ ಹೊಡುತಿದ್ದ. ಬಿಟ್ಟ ಕಣ್ಗೆ ತೋರಿತಾಗ ಶೈಲ-
ದಗ್ರಭಾಗದಿಂದಲುರುಳಿ ದುಮುಕಿ ಬೀಳ್ವ ಬಂಡೆಯಂತೆ!
ಹಾರಿಹೋಯ್ತು ಕಣ್ಣು, ಮಾನ ವಿಷವ ಕೊಂಡು ಮೂರ್ಛಿಸಿತ್ತು!
ರೋಷ ಹೃದಯಕಂದರದಲಿ ಹಸಿದು ಗರ್ಜಿಸಿತ್ತು!-ಚಂದು
ಬಾಲವೆತ್ತಿ ತಾಯ ಬಳಿಗೆ ನೆಗೆದು ಬರುವ ಕರುವಿನಂತೆ
ಕಾಲ ಬಳಿಗೆ ಬಂತೊ. ಕಾಲಯಮನ ಬಳಿಗೆ ಬಂತೊ? ಬರಲು–
ನುಂಗುವಂತೆ ನೋಡಿ, "ಭಂಡ! ಸಾಯದೇಕೆ ಮುಸುಡ ತಂದೆ?
ತಿಂದೆ ಮಾನಧನವ!" ಎಂದು ಗುಡುಗಿ, ಹೆಡೆಯ ಹಾವಿನಂತೆ
ತುಂಡದಲ್ಲಿ ತೂಗುತಿರುವ ನೇವಳವನು ಕಂಡು ಚಕಿತ–
ಗೊಂಡು ಮೆಯ್ಯ ಕಂಗಲೆಗಳ ಕಣ್ಣ ಕಲಕೆ ಘೋರಶಂಕೆ- ೪೨೦
ಗೊಂಡು, ರಕ್ತವರ್ಣಲಿಪ್ತಚೇಲಖಂಡ ಸಿಡಿವ ಮನಕೆ
ಖಂಡಿತವನು ಕೊಡಲು, "ಸತ್ತ ಸೊಣಗ! ಧನಿಯ ಸುಲಿದು ತಿಂದು
ಬಂದೆ! ಸಾಕಿದೆನ್ನ ಕೊಂದ! ಸಂದು ಹೋಗೆ"ನುತ್ತ ನಾಯ
ಕಂಧರದಲಿ ತುಡುಕಿ ಜಗಲಿಗೊತ್ತಿ ಬಲಿದ ಬಲದ ಮುಷ್ಟಿ–
ಯಿಂದ ತಲೆಯನಪ್ಪಳಿಸಲು, ನಂದಿಹೋಯ್ತು ಜೀವ! ಘ್ರಾಣ-
ರಂಧ್ರ ಬಿರಿದು ಗುಳುಗುಳೆಂದು ಸುರಿವ ಮೂರ್ಧರಕ್ತ ನಿಷ್ಕ-
ಲಂಕ ಭಕ್ತಿಯಿಂದಲೊಡೆಯನಡಿಯಲಿಟ್ಟಶೋಕಪುಷ್ಪ-
ಪೂಜವಾಯ್ತು! ಕೊನೆಯದಾಯ್ತು! ಆದರ ಸೇವೆ ಸಂದುಹೋಯ್ತು!

ಗಜರುದನಿಯ ಸದ್ದು ಕಿವಿಯನೊದೆಯೆ. ಸಂದಿ ಸಡಿಲಿ ಕಾಲು
ನಡನಡುಗುತ ಹೊರಗೆ ಬಂದ ಸತಿಯ ಕಣ್ಗೆ ಬಿದ್ದುದೊಡೆದ
ಅಮೃತಭಾಂಡ! ಉದುರಿತವಳ ಹರಣದೊಂದು ಖಂಡ! "ಅರೇ"
ಎನುತ ಕೀರುಗುತ್ತುತ್ತಿರುವ ರವಕೆ, ಕಾದ ಕಬ್ಬಿಣಕ್ಕೆ

ಮಲಿವ ಮೊಗವನೆತ್ತಿ ಸೆಟ್ಟಿ ನುಡಿದ–"ನೋಡು! ಹಾಲ ಕುಡಿದ
ಕರಿಯ ಹುಲಿಯು; ಎನ್ನ ಜೀವದೊರತೆಯಲ್ಲಿ ವಿಷವ ಕಾರಿ
ಕಡಿಸಿ ಕೊಂದ ಕೊಳೆಯ ಹಾವ; ಎನ್ನ ನುಡಿಯ ಮುಕ್ಕಿ ಸೊಕ್ಕಿ
ನರನ ನೆತ್ತರೀಂಟಿ ಬಂದ 'ಕಲಿ'ಯ ಕೈಯ ಮಸೆದ ಅಸಿಯು.
...ಕೊಟ್ಟ ನೇವಳವನು ತರುವ ಕೆಟ್ಟ ಬುದ್ಧಿ ಮೀರಿ ಮರುಳು
ಹುಟ್ಟಿತಹುದು, ನೋಡು! ರನ್ನದುಡೆಯ ನೂಲು ಬಾಯೊಳಿಹುದು.
ಕಚ್ಚಿ ತೆಗೆದುದೆಂದು ಮೆಯ್ಯ ರಕ್ತಲೇಪ ನುಡಿಯುತಿಹುದು;
ವಸ್ತ್ರಖಂಡ ಹೊಲೆಗೆಲಸಕೆ ಸಾಕ್ಷಿಯಾಗಿ ಜೋಲುತಿಹುದು! ೪೪೦
....ಎನ್ನ ನಾಲಗೆಯನು ಸೀಳ್ದುದೊಂದೆ ಸಾಲದಾಯ್ತೆ ವಿಧಿಗೆ?
ಕುನ್ನಿಯಿಂದ ಕೊಲಿಸಿದಂಥ ಬೇಡನೆನ್ನ ಮಾಡಬೇಕೆ?
ಅಯ್ಯೊ, ಪದ್ಮವತಿಯೆ! ನಮ್ಮ ಜನ್ಮ ಮಣ್ಣುಗೂಡಿತಲ್ಲ!"
ಎಂದು ಮೊರೆಯನಿಡಲು, ಮಡದಿ ಬಳಿಗೆ ಬಂದು, –"ನಮ್ಮ ಚಂದು
ಕೊಂದು ಬಂದುದೇನು? ನಂಬಲಾರೆ ನಂಬಲಾರೆನಯ್ಯೊ!
ಚಂದು! ನಿನಗೆ ಸಾವ ಕಾಲಬಂದು ಬುದ್ಧಿ ತಿರುಗಿತಲ್ಲ!
ಹಿಂದೆ ನೀನು ನುಡಿಯ ಮೀರಿ ಒಂದು ಕೆಲಸ ಮಾಡಲಿಲ್ಲ:
ಇಂದು ಬಂದೆಯೇಕೊ?" ಎಂದು ಬಳಲಿ ಕುಳಿತು—ಸಂದುಹೋದ
ಭವ್ಯಭಾಗ್ಯಕೆರಗಿ ಒರಗಿ ಕನವರಿಸುವ ನೆನಹಿನಂತೆ,
ಮಂದಮಂದವಾಗಿ ಚಂದುವೊಡಲ ಮುಟ್ಟಿ ಕಂಪಿಸುತಿರೆ ೪೫೦
ತನ್ನ ಕೈಯ ಬೆರಳು,—ಕಂಡಳಲ್ಲಿ ಸತ್ಯ ಕೊರಳನಪ್ಪಿ-
ಕೊಂಡು ಮಿಡಿದ ಕಣ್ಣನೀರ ಹನಿಯ ಸಾಲಿನಂತೆ ಜೋಲ್ವ
ಸಣ್ಣ ಮುತ್ತಿನೆಳೆಯ; "ಕೊಂದು ಬರುವ ನಾಯ್ಗೆ ಸರವ ತೊಡಿಸಿ
ಸಿಂಗರವನು ಗೈವರುಂಟೆ?" ಎಂದು ಸುಯ್ದು, ಬಿಗಿದ ಹರುಕ
ನೊಂದು ನೊಂದು ಬಿಚ್ಚಿ ನೆಗೆದ ಬರಹ ತೆರೆದ ಕಣ್ಣ ಚುಚ್ಚೆ,
"ಕಂಡಿರೇನೊ? ನೋಡಿ! ನೋಡಿರೆ"ಂದು ಕೂಗೆ, ನಡುಗಿ ಸೆಟ್ಟಿ
ಕೈಯೊಳದನು ಕೊಂಡ! ತನ್ನ ಹಣೆಯ ಬರಹಗಳನು ಕಂಡ!!
ಗಿರ್ರನಾಗೆ ಮಸ್ತಕಾಗ್ರ, ಉಸಿರು ಅಳ್ಳಿಗಾಗೆ ಅಸ್ತ್ರ

ಕಲ್ಲ ಕೊರೆವ ನರಳುದನಿಯು ಬಿಗಿದ ಕೊರಳ ಬಿರಿದು ಹೊರಡೆ,
— ಹುಲ್ಲ ಹೊದೆದ ಗರ್ತದಲ್ಲಿ ಕುಸುಕಿ ಬೀಳುವಾನೆಯಂತೆ,— ೪೬೦
ನಿಲ್ಲಲಾರದುದುರಿದನು ನೆಲಕ್ಕೆ, ಚಂದುವಿನ ಕೆಲಕ್ಕೆ.

ಬೀಡುಮನೆಯು ಸುಟ್ಟ ಬೆಂಕಿ ತನ್ನ ಬಸಿರ ಕುಂಡದಲ್ಲಿ
ಹಾರಿ ಬಂದು ಬೀಳೆ, ತಾನೆ ಕಡಿದ ಧರ್ಮತರುವದಕ್ಕೆ
ಸೌದೆಯಾಗೆ, ಕೊಂದ ನಾಯ ದಿವ್ಯಗುಣವೆ ಹವ್ಯವಾಗೆ,
ಆಗಳೊಂದನಂತಶೋಕಯಾಗದೀಕ್ಷೆಗೊಂಡ ಸೆಟ್ಟಿ.

ಕಣ್ಣಮುಂದೆ ಮಲಗಿರುವುದು ಪುಣ್ಯದೇಹ ; ತನ್ನ ಸತ್ಯ-
ವನ್ನು ನುಡಿಯೆ ಬಾರದಿರುವ ಬರಡು ನಾಲಗೆಯನು ಕಚ್ಚಿ
ಖಂಡಿಸುತ್ತಲಿಹುದು ಕಿಸಿದ ವಕ್ತ್ರ: 'ಧನಿಯೆ ! ನಿನ್ನ ಕೈಯೊ-
ಳುಂಡ ಹಾಲನೆಲ್ಲವಿದಕೊ ಕೊಂಡು ಹೋಗೆ'ನುತ್ತ ತೆತ್ತ
ಗಂಡುತನವ ತೋರುವಂತೆ ತೋರುತಿಹುದು ಸುರಿದ ರಕ್ತ. ೪೭೦
ನೋಡಲಾರ ! ನೋಡದಿರುವನೆಂತೊ ? ಮಾತನಾಡಲಾರ !
ಆಡದಿರುವನೆಂತೊ ? ಪುತ್ರನಿರ್ವಿಶೇಷವಾಗಿ ಸಾಕಿ
ಸಾಯೆ ಬಡಿದ ಕೈಗೆ ಸೋಂಕಲಹುದೆ ? ಸೋಂಕದಿರುವುದೆಂತೊ ?
ನಾಯ ಗುಣವನೆಣಿಸಲದರ ರೋಮವೊಂದಕೊಂದು ಸೂಜಿ-
ಯಾಗಿ ಬಂದು ತಿವಿಯದಿರುವುದೆಂತೊ ? ನೆನೆಯದಿರುವುದೆಂತೊ ?

"ಕತ್ತಲೆಯಲಿ ಕಾಣದಿರಲು ಮುನಿದು ಕಣ್ಣ ಕಿತ್ತುಕೊಂಡ.
ಸ್ವಪ್ನದಲ್ಲಿ ಹಗೆಯ ಕಂಡು ಅಪ್ಪಿದವಳನೊತ್ತಿ ಕೊಂದ
ಹುಚ್ಚನಾದೆ, ತುಚ್ಛನಾದೆ ! ಸತ್ಯಸುರಭಿ ಕೆಚ್ಚಲೂಡೆ
ಕಚ್ಚಿ ತಿಂದೆ ! ಧರ್ಮಕಲ್ಪಲತೆಯ ತಾಯಿಬೇರನಗಿದೆ !
……ಆರೊ ಚಂದು ನೀನು? ನಾಯೊಳಿಂಥ ಮಹಿಮೆ ಕಂಡುದುಂಟೆ? ೪೮೦
ಮೂರೆ ದಿವಸದಲ್ಲಿ ಗುಮ್ಮಣಾಳ್ವನೆಂಬ ರಕ್ಕಸನನು
ದೇವನಾಗಿ ಮಾಡಿಬಂದೆ ! ಬಿರುದುಬಾವಲಿಗಳ ತಂದೆ !
ಆದರೇನೊ ಮಗನೆ ! ಮೂರು ವರ್ಷ ನಿನ್ನ ಸಂಗದಲ್ಲಿ
ಬಾಳಿದೆನಗೆ ಬಾರದಾಯ್ತು ಬುದ್ಧಿಯೆನಲದೆನ್ನ ಸಹಜ-

ಭಾವವೆಷ್ಟು ಹೀನವೋ ! ಅಘಾದಿಯೆಷ್ಟಗಾಧವೊ ! ಕ-
ಠೋರದೈವಕಾದೆನಲ್ಲ ಕೈಯ ಕವಣೆಗೊಂದು ಕಲ್ಲು !
........ಮನುಜನೆಂಬ ಹೆಮ್ಮೆಯೇರಿ, ಒಡೆಯನೆಂಬ ದುಡುಕು ಮೀರಿ.
ನಡತೆ ಹೆತ್ತ ಮುದ್ದುಮಗನ ತುಡುಕಿ ಹೊಯ್ದು ಕೈಗಳಿವನು
ಬಿಗಿದು ಕಲ್ಲಗಾಣದಲ್ಲಿ ನುರಿಯಿರಿದಕೊ, ನರಕದವರೆ !
ತಡೆಯದಿಲ್ಲಿ ಬನ್ನಿರೆನ್ನ ಭಾವಿಬಂಧುಗಳಿರ ! ನಿಮಗೆ ೪೯೦
ಕುಡಿಸಲೆಂದು ಕುದಿಯುತಲಿದೆ ಹೃದಯಘಟದ ರಕ್ತ, ಕವಳ-
ಗೊಳಿಸಲೆಂದು ತವಕಿಸುತ್ತ ಮಿಡಿಯುತಲಿದೆ ಕರುಳ ಮೊತ್ತ.
........ಬಾರೊ ಬಂಟ ! ಒಂದು ಬಾರಿ ಕೃಪೆಯ ತೋರೊ ! ತೆಗಲೆಯೇರಿ
ಹೀರೊ ನಿನ್ನ ಕೊಂದ ಕೊಬ್ಬ ; ನೋಡಿ ನೋಡುತಪ್ಪುತಬ್ಬಿ
ಹಾರಲೆನ್ನ ಜೀವ ! ಬಳಿಕ ಸಾರೊ ನೀನು ಸೂರೆಗೊಂಡ
ವೀರಧಾಮವನ್ನ ; ತಡೆವುದಿಲ್ಲ. ಕಂದ! ಬಡಿವುದಿಲ್ಲ!"

ಗಾಳಿ ತರಗೆಲೆಗಳ ತೂರಿ ಹಾರಿಸುತ್ತಲೂರಲೆಲ್ಲ
ರೋದಿಸುತ್ತಲಿತ್ತು. ಚೂದು ಕಿಚ್ಚ ಗದ್ದಿತೆಂಬ ಮಿಂಚು
ಬೀಸುತ್ತಿತ್ತು ; ಒಡನೆ ದುಃಖವಾರ್ತೆ ಗುಡುಗಿ ನಡುಗಿಸಿತ್ತು ;
ಕೇಳಿ ಊರ ಜನವೆ ಮರುಗಿ ಸೆಟ್ಟಿಯೆಡೆಗೆ ಧಾವಿಸಿತ್ತು. ೫೦೦
ನೋಡಿದತ್ತ ಕತ್ತಲನ್ನೆ ಕಾಣುತಿದ್ದ ಸೆಟ್ಟಿಗಾಗ
ಶೋಕದಗ್ಧವಾಗಿ ಬರುವ ಮಂದಿಯೆಲ್ಲ ಕೊಳ್ಳಿದೆವ್ವ-
ದಾಟದಂತೆ ತೋರುತಿತ್ತು. ಅದರಲ್ಲಿ ತಾಪಯೋಗ-
ದೇರುಗದ್ದುಗೆಯ ಮಹಾಸಮಾಧಿಯಲ್ಲಿರಲ್ಕೆ ಸೆಟ್ಟಿ,
ಮೌನಭಂಗವೆಸಗೆ ಧಾರ್ಷ್ಟ್ಯವಾರಿಗೆಂತು ಬಹುದೊ ? ದುಃಖ-
ದೋಷವಾವರಿಸಿದ ಮೊಗವ ನೋಡಿ ಮಾನಿನಿಯನು ಲಜ್ಜೆ-
ಗೀಡುಮಾಳ್ಪ ಖೋಡಿಯಾವನಹನೊ ? ತಮ್ಮ ಹಳ್ಳಿಯೂರ
ತಾಯಿಯಲ್ಲಿ, ತಂದೆಯಲ್ಲಿ, ತಪ್ಪ ಹೆಕ್ಕಿ ನುಡಿವನಿಹನೊ ?

ನೋಡಲೇಕೊ ಚಂದ್ರವಿರವ ? ನೀತಿನಿರ್ಮಲಾಂಬುವಿನಲಿ
ಬಾಳೆಯಂತೆ ಹೊಳೆಯುತಿದ್ದ ಸೆಟ್ಟಿಯೆದೆಯ ಹಿಂಸೆಯೆಂಬ ೫೧೦

ಗಾಳದಲ್ಲಿ ಸಿಲುಕಿ ನೆಲಕೆ ಬೀಸೆ ಬಿದ್ದ ತೆರದಲಿಹುದ !
ಕಂಡು ಕಣ್ಣ ಮುಚ್ಚಿ, ಜಗವ ಮುಂದಲೆಯಲಿ ಹಿಡಿದು ಕುಣಿವ
ಚಂಡವಿಧಿಗೆ ಬೆಚ್ಚಿ, ಮೊಗವ ತಿರುಹಿ, ಮೋರೆ ಮೋರೆ ನೋಡಿ-
ಕೊಂಡು, ತಮ್ಮ ಮನದ ನೆಳಲನನ್ಯಮುಖಕೆ ಕೊಟ್ಟು ಕೊಂಡು,
ಮೆಲ್ಲಮೆಲ್ಲನಡಿಯನೆತ್ತಿ, ಬಂದ ನೆರವಿ ಬರಿಯಿತೆಲ್ಲ,

ಅನಿತರಲ್ಲಿ ಗುಮ್ಮಣಾಳ್ವನಿತ್ತ ಪಲವ ಹಂಬಲಿಸುತ
ಮಸಣದಂತೆ ತೋರುತಿದ್ದ ಮನೆಯ ಬೂದಿಗೆದರಿ, ಸುಟ್ಟ
ಸಿರಿಯ ಶೇಷಗಳನು ಉರಿವ ಬಿಸಿಲಿನಲ್ಲಿ ಹೆಕ್ಕುತಿರಲು.-
ಮನದ ಬೇಗೆಯಿಮ್ಮಡಿಸಿತು, ತನ್ನ ಪಲವು ಕಿಡುಗೆಲಸದ
ನೆನಹಿನೊಂದು ನಂಜು ನಾಲ್ಮಡಿಸಿತು ; ಬಳಿಕ, ಮಾನ ಮುಚ್ಚ- ೫೨೦
ಲೆನುತ ಮುಸುಡನಡಗಿಸಿದುದರಿಂದ, ಪಡೆದ ತಾಯ ತೆರದ
ಬಡವು ಚಂದು ಮಡಿದು ಹೋಯಿತೆನುತ ಸಿಡಿದ ಸುದ್ದಿ ಕಿವಿಯ
ನೊಡೆದು ಹೊಕ್ಕು, ಚುರುಚುರೆನುತ ಎದೆಯ ಹೀರಿ, ಕಣ್ಣುಗಳನು
ಗರಗರೆನುತ ತಿರುಗಿಸಿತ್ತು, ಕೆಡೆಯಿಸಿತ್ತು ; ತನ್ನ ಬಂಧು-
ಬಳಗವೆಲ್ಲ ರೋದಿಸಿತ್ತು ; ಬಳಿಕ ಎಚ್ಚರಾಗಲೆದ್ದು-
"ಮನೆಯ ತಿಂದ ಮೃತ್ಯುವೆನ್ನ ಅಗಿದು ನುಂಗದುಗುಳಿತಲ್ಲ !
ಅದುವೆ ಹೇಸಿದೊಡಲ ತೊಳೆವ ಕರುಣೆ ಬೇರದಾರಿಗಿಹುದೊ ?
ನಡೆವೆ, ಸೆಟ್ಟಿಯಡಿಗೆ ಬೀಳ್ವೆ ; ಅವನ ನಾಯಿಯಾಗಿ ಬಾಳ್ವೆ !"
ಎನುತದೆಂತೊ ಬಂದ ; ಶೋಕತೀರ್ಥದಲ್ಲಿ ಮುಳುಗಿ ಮಿಂದ !

೦ ೦ ೦ ೦

ಬಂದು ಹೋದ ಮಂದಿ ಹೊತ್ತ ದುಗುಡವೆಂಬ ಹೊರೆಗೆ ಸುಂಕ- ೫೩೦
ವೆಂದು ಸುಯ್ದು ಸುಯ್ಕು ಸುಳಿಯುತಿಹುದ ; ತನ್ನ ಕೊಂದ ಕೊಲೆಗೆ
ನೊಂದು ಬೆಂದ ಸೆಟ್ಟಿಯೆದೆಯು ಬಾತುಹೋಗಿ, ಲೋಹದೊಂದು
ಗುಂಡ ಕಾಸಿ ಬಡಿವ ತೆರದಿ ಬಡಿಯುತಿಹುದ ; "ಚಂದು, ಚಂದು" !
ಎಂದು ಕರಗಿ ಕಣ್ಣನೀರ ಗಿಂಡಿಯಾದ ಪದ್ಮವತಿಯ

ದುಂಡುಮೊಗವ ; ಜಗಲಿಯಡ್ಡಕಂಡಿಯಲ್ಲಿ ಕೊನೆಯ ತೂರಿ
ಒಂದೆ ಒಂದೆ ಉದುರಿ ಬಿದ್ದು ಕಂದಿಹೋಗುತ್ತಿರುವ ಹೂವಿ-
ನೊಂದು ಪಾರಿಜಾತಗಿಡವ,-ಕಂಡು ಮನೆಗೆ ಕತ್ತಲಾಯ್ತು !

೦ ೦ ೦ ೦

ಗ್ರಹಣಗೊಂಡು ಮುಳುಗುತಿರುವ ಶಶಿಯ ತೆರದಿ, ಚಂದುವ್ರೊಡಲ-
ನೆದೆಯೊಪ್ಪಿ ಕಾಣುತ್ತಿದ್ದ ಬಳಿಯ ಬೋಳುಗುಡ್ಡದೊಂದು
ಹೊಡೆಯಲಿದ್ದ ಸೆಟ್ಟಿ. ಅಲ್ಲೆ ಮಡಗಿ ತನ್ನ ಜೀವನಿಧಿಯ ; ೫೪೦
ಬಳಿಕ ಕಲ್ಲು ಕಡಿದು ಕೆತ್ತಿ ಕಟ್ಟಿಸಿದನು-ತನ್ನ ಕಣ್ಣ
ಕೆರೆಗೆ ಕಟ್ಟೆಯಂತೆ-ಕಿರುಸಮಾಧಿಯೊಂದನಲ್ಲಿ ; ಬಳಿಯೆ
ತನಗೆ ಮಲಗಲಿರುವ ನೆಲವ ಗುರುತಿಸಿದನು. ದಿನದಿನದಲಿ
ಬೆಳಗುಜಾವದಲ್ಲಿ ಬಂದು ಇರುಳ ಶೋಕಸಂಚಯವನು
ಸುರಿಯುತಿಹನು ; ತಂದ ನಾಲ್ಕು ಉದಿರುಹೂವನಿಟ್ಟು, ಹಿಂದೆ
ತಿರುಗಿ-ತಿರುಗಿ ನಿಂದು-ನಿಂದು ನೋಡಿ-ನೋಡಿ ತೆರಳುತಿಹನು.
ಸಂಜೆಯಲ್ಲಿ ಸಣ್ಣ ಹಣತೆಯೊಂದ ಕೊಂಡು, ಸುಳಿವ ಮಿಂಬು-
ಳೆಂಬ ತೆರದಿ ಗುಡ್ಡವೇರಿ, ವಿಧಿಯ ಶಾಪದಿಂದ ಕಲ್ಲ
ಕೊಂಪೆಯಾದ ತನ್ನ ಪುಣ್ಯರಾಶಿಯೆಡೆಗೆ ಬಂದು, ನಿಂದು.
ತಂದ ಜ್ಯೋತಿಯೊಪ್ಪಿಸುವನು.-ಕಂದಿ ಕಂದಿ ಕರಿಕುವದರ ೫೫೦
ಮಂದ ಕಾಂತಿಯೊಡನೆ ಜೀವ ಕುಂದಿ ಕುಂದಿ ಒಂತು ; ಆಯು
ಬಿಂದುಬಿಂದುವಾಗಿ ಗಲಿತವಾಯ್ತು ! ಶೂನ್ಯ ಲೀನವಾಯ್ತು !

೦ ೦ ೦ ೦

ಜ್ಞಾತಿವಧೆಯ ದೋಷಭಯ ವಿವೇಕವನ್ನು ಕೆಡಿಸಲಂದು
ದೇಶದೇಶಗಳನೆ ಗೆದ್ದು ತನಗೆ ತಂದ ಕುದುರೆಯೊಂದ
ದ್ವಾಪರದಲಿ ಧರ್ಮರಾಯ 'ಧರ್ಮ ! ಧರ್ಮ' ಎಂದು ಕೊಂದ-
ನಾದರೆರಡು ಕಣ್ಣನೀರ ಹನಿಯು ಕೂಡ ಅದಕೆ ದೊರೆವ

ಯೋಗವಿತ್ತೆ ? ಮಾತು, ನೀತಿ ಮೀಸಲಳಿದುವೆಂಬ ಶಂಕೆ
ಬಾಧಿಸಲ್ಕೆ ಸೆಟ್ಟಿ ಕೊಟ್ಟ ಬಲಿಯುಡಾಗಿ ಹೋಯ್ತು ಚಂದು.
ಆದರೇನು ? ಕೊಂದ ಕೊಲ್ಲದೆಲ್ಲ ಮಂದಿ, ಹಿಮಗಿರಿಯಲಿ
ಜಾರಿ ಬೀಳ್ವನಂತವಾರಿಧಾರೆಯಂತೆ ಸುರಿದಖಂಡ- ೫೬೦
ಶೋಕಧಾರೆ ಯಜ್ಞಪಶುಗಳಗ್ರಪಟ್ಟಗಟ್ಟಿತಲ್ತೆ !
ನಾಯದೆಂಬ ಮಾತ ಮುಚ್ಚು ! ನರರ ಹೆಕ್ಕಳಿಕೆಯ ಕೊಚ್ಚು,
ರಾಗರೋಷಗಳನು ಹಿಡಿವ ಬಲ್ಮೆಗಳನು ಒರೆಗೆ ಹಚ್ಚು !

೧೯೩೫

# ಪುಣ್ಯಲಹರಿ

ಅಥವಾ

# ಶಬರಿ

(ಪಿರಿಯಕ್ಕರ)

೧

ವಿಂಧ್ಯಾಟವಿಯಲ್ಲಿ ಭಿಲ್ಲರೊಡೆಯನಲ್ಲಿ
ಹದಿನಾರು ತುಂಬಿದ ಕನ್ನೆ ತುಂಬಿ,
ಕಲ್ಲ ಪುತ್ತಳಿ ಜೀವ ನೆತ್ತರು ತುಂಬಿ
ನಲಿದಂತೆ ಸುಳಿದಳು ಮನೆಯ ತುಂಬಿ;
ಮೆಲ್ಲನೊಂದಂಗುಲಿಯಲಿ ಸಿಡಿಯೆ ರಕ್ತ
ಚಿಮ್ಮಬಹುದು ಎಂಬ ಪರಿಪೂರ್ಣಾಂಗಿ,
ಹಣ್ಣುನೇರಿಲ ಹೊಗರ ಮೆಯ್ ಹಾಲ್ಮನ
ಬೆಳ್‌ಬೆಳಗಿನ ಕಣ್ಣುಗಳ ಶಬರಿ.

೨

ಭಿಲ್ಲರೊಡೆಯನ ಮಗಳ ಮದುವೆಗೆಂದು
ಬಿಂಜದ ವನಕೆ ವಸಂತ ಬಂತು;
ಹೆಣ್ಣು-ಜಾತಿಗೆ ಕಣ್ಣರಳಿತು, ನಗೆ
ಮಲ್ಲಿಗೆಯಾಯ್ತು, ಮೆಯ್‌ಸಿರಿಯೇರಿತು;
ಮಲ್ಲ–ಬಿಲ್ಲಾಳುಗಳ ಹೊಂತಗಾರಿಕೆ
ಕಾಡಿನ ಜಾಡ್ಯವ ಬಡಿದಟ್ಟಿತು;
ಚೆಲ್ವು ಚೆಲ್ಲಿತು, ಸಿಂಗರ ಸುರಿಯಿತು,
ಸೊಲ್ಲು ಸರಸವಾಯ್ತು, ಮದವುಕ್ಕಿತು.

೩

ನಾಳೆ ಮದುವೆಯು ವೇಳೆಯೆನಲ್ಕಿಂದು
 ಬಾಲಿಕೆಯರ ತಂಡ ಬಿಜಯಿಸಿತು;
ಕಾಡ ಕೋಗಿಲೆ ಮೇಳೈಸಿ ಕರೆದಂತೆ
 ಮೋಹಿನಿಯರ ಹಾಡು ಮೋಹಿಸಿತು;
ಸಾಲುಸಾಲಾಗಿ ಸುತ್ತುತ ಸುಳಿಯಾಗಿ
 ಲೋಲಾಂಗಿಯರ ನೃತ್ಯ ಲೀಲೈಸಿತು;
ನೀರ ನೊರೆಯಂತೆ, ಬಾನಿನ ಹೆರೆಯಂತೆ,
 ನೀಲಾಂಗಿಯರ ನಗೆ ದೀಪಿಸಿತು.

೪

ಹೊನ್ನ ಬೊಟ್ಟಿನ ಚೆಂಬುಲ್ಲ ತೊಗಲಿನ
 ಚಿಗುರಿನ ಹವಣಿನ ಐರಿಯನುಟ್ಟು,
ಸಣ್ಣ ಬೆರಳಿನ ಕರಿಯ ಸುಂಡಿಲ ಕೈಗೆ
 ಬಿಳಿಯಾನೆದಂತದ ಬಳೆಯ ತೊಟ್ಟು,
ಜೋಲ್ವ ಮುತ್ತಿನ ಸರವುಬ್ಬಿದೆದೆಯಿಂದ
 ಭಾಗೀರಥಿಯವೋಲು ದುಮುಕುತಿರೆ,
ಬಾಳೆ ಹೊಳೆದಳು, ಮುಡಿಯ ನವಿಲಗರಿ
 ನೀಲಚಂದ್ರಾಸ್ಯದ ಕದಿರಂತಿರೆ.

೫

—"ಭಿಲ್ಲತರುಣಹೃದಯವನಸಾರಂಗಿ!
 ನಿಲ್ಲುನಿಲ್ಲದೊ ಬಂದ ಬೇಟೆಗಾರ!
ಬಿಲ್ಲ ತಾರ, ಹಿಡಿಯದಿರಲಾರ! ಹಿ-
 ಡಿದು, ಬಿಡಲಾರದ ಬೇಟೆಗಾರ!
ನಲ್ಲನದೊ ಬಂದ, ನಗುತ ನಗುತ ನಿಂದ;
 ಗಲ್ಲವು ಬಲು ಚೆಂದ! ತನುವಿನಂದ,—
ಚೆಲ್ಲಗಾರ್ತಿ!—ಲಜ್ಜೆಗೆ ಮಸೆಗತ್ತಿ; ಮ-
 ದುವೆ ನಮಗಾರ್ತಿ, ಕುಣಿಯಲಾನಂದ!"

೩೦

ಚಂದ್ರಕಾಂತಿ, ಕೊನೆಯ ಜಾವದಲಿ, ಕಂದು-
ವಂತೆ ಯೌವನಕಾಂತಿ ಮಾಸುತಿರೆ,
ಬಾಂದಳದಿ ಹರೆಗಟ್ಟುವ ಮುಗಿಲಂತೆ
ಅಂಗಗಳಲಿ ವಲಿ ಹರೆಯುತಿರೆ,
ಇಂದ್ರದಿಶೆಯುಷೆಯನು ಪಡೆದಂತಿರೆ
ಮುಂದಲೆಯಲಿ ನರೆ ಮೂಡುತಿರೆ,
ವಂದಿಸುತ್ತಿರೆ ಮುನಿವೃಂದ, ಮುಗಿವ ವಿ-
ಭಾವರಿಯಂತೆ ಭಾವಿಸಿಯಿದ್ದಳು.

೩೧

ನಂಬಿದವರೆದೆಯುಚ್ಚಿನಲೆರಕವ
ಕೊಂಬ ಮೆಯ್ಯ ಬೆಡಂಗ ಮೆಯ್ಗೊಂಡನು;
ತಂದೆತಾಯೆಂದು ನರರ ಕರೆದು, ಸೀತೆ-
ಯೆಂದಾತ್ಮಲಕ್ಷ್ಮಿಯನೊಡಗೊಂಡನು;
ಮಂಥರಾಗ್ನಿ ಮನೆಯ ಸುಡೆ ಚಾಗದ
ಗಂಗೆಯೊಳ್ ನಂದಿಸಿ ಹೊರವಂಟನು;
ಕಾಂತಾರವ ಹೊಕ್ಕು ತ್ರೇತಾಯುಗದ ಭಾಗ್ಯ
ಸಂಚರಿಸಿತು!-ರಾಮ ಚರಿಸಿದನು,

೩೨

ಮಾಯಾಮೃಗವನಟ್ಟುವ ನೆವದಲಿ ಭಿಲ್ಲ
ಲೀಲೆಯ ಕೈಕೊಂಡು, ನಾರೀತ್ವದ
ಮಾನಮೇರುವನೆತ್ತಲರ್ಧಾಂಗಿಯ
ನೇಮಿಸಿ ನಗಧಾರಿ, ಕುಂತಳದ
ಭೂಮಿ ಸುರಭಿಕರೆಯೆ ನಡೆತಂದನು;-
ನೀರು ತುಂಬಿತು ತುಂಗಭದ್ರೆಯಲಿ!
ದಾರಿ ಮಿಂಚಿತು! ಶೈಲವು ನಮಿಸಿತು!
ಬಾನಿಂದ್ರಚಾಪಧ್ವಜವನೆತ್ತಿತು!!

೩೩

ಸಕಲೇಂದ್ರಿಯಾವಂತರ್ಮುಖವಾಗಿ ರಾಮನ
ಚರಣನಖಾಗ್ರದಿ ನಿಂದಿರಲು,
"ಶಬರೀ!" ಎಂದು ದೇವಧ್ವನಿ ಕಿವಿಯಲಿ
ಜಯಘಂಟೆಯಾಗಿ ನಿನಾದಿಸಿತು ;
"ಪ್ರಭುವೇ ! ಬಂದೆಯ!" ಎನುತ ಪುಣ್ಯದ ಕಣ್ಣ
ತೆರೆದಳು, ಪರಮತೇಜವ ಕಂಡಳು!
ಯಮುನಾನದಿ ಭಾನುಬಿಂಬವರಳೆ ನಲಿ-
ನಲಿವಂತೆ ಜಗಜಗಿಸುತ ನಿಂದಳು!

೩೪

ಮೇಘಮಾಲೆ ಮಿಂಚಿನೊಳಾಡುವಂತಿರೆ
ದೇವನ ಬಳಸಿ ಪ್ರಭಾಮಂಡಲ,
ಶ್ಯಾಮಶೋಭಾಂಗದರಸಾಗಿ ತಂಪಿನ
ಸೂರ್ಯನಾಗಿರೆ ದಿವ್ಯಮುಖಮಂಡಲ,
ಧ್ಯೇಯವೇ ನೂರುಮಡಿ ಚೆಲ್ವುಗೊಂಡು ದ-
ಯಾಘನವಾಗಿ ಬಳಿಗೆ ಬಂದಿರೆ,-
ದೇಹದಳವು ಸಂಖದಿ ತುಂಬಿತುಳುಕಿತು
ಮೆಯ್ಯೆಲ್ಲ ಮಧುರಮಧುರವಾಯಿತು,

೩೫

ರೋಮರೋಮದಿ ನಗೆ ಸೂಸುತಿರೆ, ಕಣ್ಣ
ಕೇದಗೆ ಮಘಮಘಿಸಲು, ಬಾಷ್ಪದ
ವಾರಿ ನವನವ ನಕ್ಷತ್ರವಾಲೆಯ
ಜೋಲಿಸುತಿರೆ, ಹಜ್ಜೆಯಲಿ ನೆಲವೇ
ಹೂವಿನಂತರಳುತಿರೆ ಶಬರಿ ಬಂದು,
ದೇವಗಂಗೆಯ ತಾಯಿತಂದೆಗಳ-
ರಾಮನಡಿಗಳ-ಹಿಡಿದಪ್ಪಿಕೊಂಡಾಡಿ
ಮುಂಡಾಡಿ ಕಾಂತಿಯ ಮುಡಿದಳಹೋ!

೩೬

ತೋಳುಗಳ ಹಿಡಿದೆತ್ತಿದ ವಿಶ್ವದ
ತಾಯಿಗೆ, ಕಂಪಿಸುವಂಜಲಿಯ
ಸೂಡಿದಳು ತನ್ನ ಭಾಲಾಗ್ರದಲಿ, ಜಗ-
ದಾಲಂಬಕಾರ್ದ್ರಕರಾಲಂಬವ
ನೀಡಿ ಕರೆತಂದು, ಮರದಡಿಯಲಿ ಪುಷ್ಪ-
ವಾಸಿತ ಪುಲಿನದಿ ಕುಳ್ಳಿರಿಸಿ,
ಪೂರ್ವಭವಗಳನೆಂಬಂತೆ ಬಕುಲದ
ಮಾಲೆಯನೊಪ್ಪಿಸಿದಳು ಕಂಠಕೆ.

೩೭

ಝಲ್ಲಸಲ್ಲಲ್ಲಿ ಮಿಂಚಿ ಹಣ್ಗಳ ಹೆಕ್ಕಿ
ಮೆಲ್ಲನೊರಸಿ ಕರಕಮಲದಲಿ,
ಮಲ್ಲಿಗೆಯಃ ಹಲ್ಲೊಳರೆಗಚ್ಚಿ ಸವಿನೋಡಿ
ಭಿಲ್ಲಿತಿ ಮುಗ್ಧಮಹಾಯೋಗಿನಿ
"ಮೆಲ್ಲು ಮೆಲ್ಲೆ"ಂದು ನೀಡಲು,–ಕೆಂಬಾಯ
ಫುಲ್ಲಿಸಿ, ಕರುಣಾತರಂಗಗಳು
ಕಣ್ಣ ವಾರಿಧಿಯೊಳಗುಯ್ಯಾಲಾಡುತ
ಸಂಮೋದಿಸುತಿರೆ, ಸವಿಯುತ್ತಿದ್ದನು !

೩೮

ಜನ್ಮಜನ್ಮಾಂತರದ ಹರ್ಷಗಳು ಹೊಸ
ಹೊನ್ನ ಘಂಟಿಕೆಗಳಂತವಯವದಿ
ಗೊಂಚಲಿಸಿ ಕಿಂಕಿಣಿಸುತಿರೆ, ಮಿಂಚಿದ
ಬಾಲ್ಯಗಳೊಂದಾಗಿ ನಗೆಮೊಗದಿ
ಸಂಚರಿಸುತಿರೆ, ಸಕಲ ಪ್ರಪಂಚವೆ
ರಸವಾಗಿ ಹೊಳೆಯಂತೆ ಕಣ್ಗಳಲಿ
ತಂಪಿಸುತ ಹರಿಯುತ್ತಿರೆ, ಜೀವದ
ತಂತಿ ಝೇಂಕರಿಸೆ, ನರ್ತಿಸುತಿದ್ದಳು.

೩೯

ದೇಹಭಾವದ ಮರೆದು ದೈವಿಕನೃತ್ಯ,
ಭಾವವರಳಿ ದೇವಬಾಲೆಯಾಗಿ,
ಪಾದಮೂಲದಿ ಹರಿದು ಜಾಹ್ನವಿಯಾಗಿ,
ಹಾಡಿ ಹೊಗಳುತ ವಾಗ್ದೇವಿಯಾಗಿ,
ನೋಡಿ ವಾತ್ಸಲ್ಯಭರದಲಿ ಕೌಸಲ್ಯಾ-
ದೇವಿಯೆ ತಾನಾಗಿ, ಸಲಿಂಗೆಯಲಿ
ರಾಮಭದ್ರನ ವರದಹಸ್ತಾಬ್ಜದ
ಸೋದರಿಯಾಗಿ,— ನೋಂತಳು ಶಬರಿ !

೪೦

ರಾಮರಾಮೆಂಬ ನಾದದಿ ವನವೆಲ್ಲ
ಲೀನವಾಯಿತು ; ರಾಮಚಂದಿರನ
ಶ್ರೀಮುಖದ ಮಂದಹಾಸದಲುಕ್ಕಿತು
ಕ್ಷೀರಸಾಗರ ! ಭಿಲ್ಲನಂದಿನಿಯ
ಬೋಧವಖಿಲಬ್ರಹ್ಮಾಂಡಬುದ್ಬುದಗಳು
ತೇಲುವಾನಂದರಸವ ಕಂಡಿತು !
ಜೀವ ಜಳಜಳಿಸಿತು. ದೇಹ ಕರ್ಪೂರ-
ವಾಗಿರೆ, ಮಂಗಳಾರತಿಯೊಪ್ಪಿತು!

೪೧

ದೇವದೇವನ ಫುಲ್ಲಪದಾಬ್ಜಪ-
ರಾಗವೀನಸುಗಂಧವಾಗಿ,
ರಾಮನಾಮಮಹಾಸಂಗೀತದ ನವ್ಯ-
ರಾಗಿಣಿಯಾಗಿ, ಪರಂಜ್ಯೋತಿಯ
ತೇಜದೊಂದೆಸಳಾಗಿ, ನಿತ್ಯಾನಂದ-
ಲೀಲೆಯ ನವಮಂದಹಾಸವಾಗಿ,
ಕೇವಲ ಬ್ರಹ್ಮರಸವಾಗಿ ಪರಿಪೂರ್ಣ-
ವಾದಳಾದಳು ಸತ್ಯ-ಶಿವ-ಸುಂದರಿ !

೧೮

ಕನ್ನಡದ ಗಿರಿಶೃಂಗರ್ಷಿಪುತ್ರಿಯು
ಮಂಗಲರೂಪವು ಮುಂದಿರಲು
ಕಣ್ಣು ಜಕ್ಕಲಿಸಿತು, ಪರವಶತೆಯೊ-
ಳುಣ್ಮಿತು ಮೊಗದಿ ಮುಗುಳ್ನಗೆಯು;
ಸಣ್ಣ ತೆರೆಗಳ ಮೆಲ್ನಗೆಮುಟಿಗಳ
ನಿರ್ಮಲಧ್ವನಿಗಳ, ನುಣ್-ಸುಳಿಯ
ಬೆಣ್ಣೆನೊರೆಗಳ, ಮುದ್ದುಹರಿವುಗಳ
ಚೆನ್ನ ಚುಂಬಿಸಿದಳಹೋ ಮನವ!

೧೯

ಹೂವುಗಳ ರಾಶಿಯನೆ ಚಾಚುವಂತಿರೆ
ಚಾಚಿ ಕೈಗಳ ನೀರ ಮೊಗೆಮೊಗೆದು
ತೋಂಕಿಕೊಂಡಳು, ತೆಗೆದಪ್ಪಿಕೊಂಡಳು,
ಮುಳುಗೇಳುತೀಸುತ ಕೆಳೆಗೊಂಡಳು;
ನೀರೊಳಾಡಿದಳ್ ನದಿಯ ಸೋದರಿಯಂತೆ,
ಮೇಲೆ ಬಂದಳು ಲಕ್ಷ್ಮೀದೇವಿಯಂತೆ;
ಮೂಡಲಿರೆ ಭಾನು ಕೊನರೆ ಪರ್ವತಸಾನು,
ತೆರೆಯಿತು ವನ್ಯಕುಸುಮದ ಸಂತೆ.

೨೦

ನಿಂದಳಲ್ಲಿ ಪುಲಿನಪುಂಡರೀಕದಿ
ತುಂಬಿಯೆಂಬಂತಿರೆ, ತಂಗಾಳಿಯು
ಮಂದ್ರನಾದಕೆ ಹೃದಯದ ರೋದನ
ಮಂದವಾಗಿರಲು ಲಲಿತಭಾವದ
ಬಂಧ ಸಡಿಲಿರೆ; ಮೂಡಿದ ಮೂಡಲ
ಹೊಂಬಿಸಿಲನು ಮೊಗೆಯುತ ಚೆಲ್ಲುತ
ಮುಂದಿರಲು ನಾಗಸಂಪಗೆ, ಕರೆವೆಳ-
ಗಂದಿಯಂತವಳೋಡಿದಳು ಹಾರುತ!

೨೧

ಸಾರಿ ಬಳಿಗೆ ಮರದ ಕಿರುಗೊಂಬನು
ಹಾರಿ ಹಿಡಿದು ಬಲಗೈಯಿಂದಲಿ
ಬಾಗಿಸುತ, ಮೇಲಕೆತ್ತಿದಳ್ 'ಮದರಂಗಿ'
ರಾಗಿಸುವೆಡಗೈಯ ವಹಿಲದಲಿ
ಹೂವ ಮುರಿಯಲೆಂದೊಡನೊಳಗಣ್ಣಿಗೆ
ತೋರಿತು ಕರಿಯ ಕೊರಳ ತರಿವ
ಮಾರಿ ನೋಟವೆ! ಚೀರುತ ಕೈಬಿಟ್ಟು
ಹಾರೆದೆಯಬಲೆ ಕುಸಿದು ಬಿದ್ದಳು!

೨೨

ಬೇಟೆಯಂಬು ನಡಲು ಕುಣಿಯುವ ನವಿಲ್
ಸೋಗೆಯು ಮುದುರಿ ಕೆಡೆದು ನೆಲದಿ
ಕೀರುವಂತಿರೆ, ಬಾಲೆ ಮಳಲನಪ್ಪಿ
ರೋದಿಸುತಿರಲು ಹೊರಳಿ ಹೊರಳಿ,
"ದೇವಿ! ನೀನಳಲೇಕೆ"ಂಬ ಗಂಭೀರ-
ವಾಣಿ ಕರ್ಣದಲಿ ಮೃದಂಗಿಸಿತು!
ತಾಯ ಕಾಲುಂಗುರದ ದನಿಯುಳುವೆಳ-
ಗೂಸನೆಂತಂತೆದೆದುಂಬಿಸಿತು,

೨೩

ತಿಳಿವೋ ದಯೆಯೊ ಪೊದಳ್ದಂತೆ, ನೈರ್ಮಲ್ಯ
ಮಡಿಯುಟ್ಟು ಬಂದಂತೆ. ಮುಂದಿರಲು
ಪುರುಷಾಕೃತಿಯೊಂದು,–ಕಂಡೆದ್ದು ಕಣ್ಬಿಟ್ಟು
ಭಯವಿಲ್ಲದಿದ್ದೊಂದು ನಡುಕಗೊಂಡು
ನಿಲಲಾರದೆ, ಕುದಿವೆದೆಯಿಂದ ನುಡಿಗಳ
ತೆಗೆಯಲಾರದೆ, ಬಾಲೆ ಕಂಬನಿಯ
ಹೊರಲಾರದೆ ಮುನಿಪದಕೆ ಬೀಳುತ್ತಿರೆ
ಹಿಡಿದಂ ಪೂಜೆಯ ಹೂವ ಹಿಡಿವಂತಿರೆ!

೨೪

ಯೋಗದೀಪವ ಬೆಳಗಿಸಿ ಶಬರಿಯ
ಹೃದಯಾಂತರಾಳವ ಮುನಿ ಕಂಡನು;
ದೇವನದಿಯ ನಿರ್ಝರದಂತೆ ಮೊರೆಯುವ
ಧಾರಾಲಕರುಣೆಗಚ್ಚರಿಗೊಂಡನು;
ಭಾವಮಂಟಪಮಧ್ಯದಿ ಹೊಳೆಯುವ
ರಾಗವರ್ಜಿತ ಚಿತ್ರಫಲಕವನು
ನೋಡಿ ತಲೆದೂಗಿ—'ವೈಕುಂಠನಿಲಯದ
ಶ್ರೀಮಂಚವಿದಕೆ ನಮೋ!"–ಎಂದನು.

೨೫

ರಾಮನಾಮಾಮೃತವನೆರೆದನು ಮುನಿ
ಬಾಲೆಯ ಹೃದಯದಕ್ಷಯ ಪಾತ್ರಕೆ;
ನೂರುಮಡಿಯಾಗಿ ತುಂಬಿತು! ಸಂತಾಪ–
ವಾರಿತು; ಸಾಯಲಾಗಿಹ ಮನಕೆ
ಜೀವ ಕೊಡಿತು; ಕರಣಸಂಕುಲ ಸೂರ್ಯ–
ಕಿರಣಕೆ ನಲಿಯುವಶ್ವತ್ಥದಂತೆ
ಡಾಳಗೊಂಡಿತು; ವಾಣಿ 'ರಾಮಾ!' ಎಂದು
ವೀಣೆನುಡಿಸಲಾತ್ಮ ಲಾಲಿಸಿತು,

೨೬

"ಭಾಗ್ಯವತಿ! ನಿನ್ನ ಕಣ್ ಭಗವಂತನ
ಕನ್ನಡಿಯಾಗಲೆ"ನುತ ಹರಸಿ
ಯೋಗಿ ಬೀಳ್ಕೊಂಡು,–ಹಗಲ ಲೋಕಕೆ ಕೊಟ್ಟು
ಮರೆಯಾಗುವರುಣನಂತಿರೆ–ವನದಿ
ದಾರಿ ಹಿಡಿದನು, ಕಣ್ಮರೆಯಾದನು;
ಹಾಡುತಲಿದ್ದವು ಹಕ್ಕಿಗಳು;
ನೋಡುತಿದ್ದನು ಬೆಳಗಿನ ರವಿ; ರಾಮ–
ನಾಮದೊಳರಳುತಿದ್ದಳು ಶಬರಿ,

೨೭

ಜೀವಿತಕೆ ಹೊಸ ಹೊಗರಾಯ್ತು, ಶಬರಿಯ
ಹೃದಯದ ರಿಕ್ತತೆ ಹರಿದೋಡಿತು;
ರಾಮಮೂರುತಿ ಭಿಲ್ಲಿತಿಯೊಲವಿನೊಳ್
ಭಿಲ್ಲಸುಂದರವಾಗಿ ನೆಲೆಗೊಂಡಿತು;
ಶ್ಯಾಮಲಾಂಗದ ಬಿಲ್ಲುಬತ್ತಳಿಕೆಯ,
ದೀನಕೃಪಾರಸದೃಷ್ಟಿಗಳ,
ಶ್ರೀಲಲಾಮದ, ವೀರವಕ್ಷದ ದಿವ್ಯ-
ಧಾಮ ಮನೋರಾಜ್ಯದೊಳಗಾಳಿತು.

೨೮

ಅಂದು ಮೊದಲು ಶಬರಿ ತುಂಗಭದ್ರೆಯ
ಸಂಗಿನಿಯಾಗಿ, ಬಳಿಯ ವನದ
ಬಂಧುವಾಗಿ ದಯಾಮಕರಂದದ
ಮಂದಾರಲತೆಯಾಗಿ, ಜೀವನದ
ಒಂದೇ ಗುರಿ ರಾಮಚಂದ್ರದರ್ಶನವಾಗಿ,–
ತಿಂಗಳ ಬೆಳಕಿನ ಲಂಬಣದ
ಹಂದರವ ಹೋಲ್ವ ಮರದಡಿ ಮನೆಯಾಗಿ-
ನಂದಾದೀವಿಗೆಯಂತೆ ಬೆಳಗಿದಳು.

೨೯

ಭವ್ಯಜೀವೆ ಚರಾಚರಜೀವದ
ಸಂವೇದನೆಯೊಳನುಕಂಪಿಸುತ,-
ಕೊಯ್ಯದುದಿರಿದ ಹಣ್ಗಳ ಮೆಲ್ಲುತ,
ಮಣ್ಣಿಗೆ ಬಿದ್ದ ಹೂಗಳನೆತ್ತುತ,–
ಒಂದೊಂದಾಗಿ ಹಣ್ಣೆಲೆ ಮಾಗಿಯಲಿ ಮರ-
ದಿಂದ ಜಗುಳುವಂತೆ ಹರೆಯದಿಂದ
ಸಂದುಹೋಗುತಲಿರೆ ವರ್ಷ, ಗಣಿಸದೆ
ಮುಂದಿನ ಸುಗ್ಗಿಗೆ ಮನವಿಟ್ಟಳು,

೬

ಇಂತು ತರತರದಲಿ ಹಾಡಿ ನಲಿವ ವ-
ನಾಂತಸಖಿಯರು ಮೇಳದೊಳೊಪ್ಪಿರೆ,
ಅಂತರಂಗವರಳಿ ಶಬರಿಗೆ ಕಂಡಿ–
ತಂತವರೊಲಿವ ಕೈ–ಮೆಯ್–ನಗೆಯೆ
ಸಂತಸದ ತೆರೆ–ನೀರ್–ನೊರೆಯೆನಲೇಳ್ವ–
ನಂತಸುಖದ ಭವಸಾಗರವೇ
ಬಂತೊ ಬಳಿಗೆನೆ; ತೇಲಾಡಿದಳು! ಮದು–
ಮಗಳೆ ಕುಣಿದಳು!! ಕೈಪರೆಗುಟ್ಟಿರೆ?

೭

ನಾಚಿ ಮನೆಯೊಳಗೋಡಿದಳಡಗಿದ-
ಳಾಳಿಯರೋಳಿ ಕುಣಿಯುತಲಿತ್ತು;
ಆಚೆ, ಕಿವಿಗಳ ಕೀಲ್ಕೈಸುವಂತಿರೆ
ಕೇಳದ ಕೂಗೊಂದು ಕೇಳಿಸಿತು!
ಏನಿದೇನೆಂದು ನೋಡಲು ನಡೆದಳು,
ಕಾಣದ ಹಿಂಡೊಂದು ಕಾಣಿಸಿತು!
ಗೇಣಿನಗಲದ ಕೂರ್ವಾಳ ಮಸೆಯುವ
ಕೀತಾಳ ತಂಡ ಕೆಲದೊಳೊಗ್ಗಿತು!

೮

ಬಾಡುಗಿವಿಗಳ ನೀಡಿದ ಕೊರಳಿನ
ನೇಲುವ ಕೆಚ್ಚಲ ಮೇಕೆಗಳು,
ಬಾಲಗೊಂಬನು ಮೇಲೆತ್ತಿ ಗಡ್ಡದ
ಚೌಲಿಯ ಕುಣಿಸುವ ಹೋತಗಳು,
ಕೋಡ ಸುಳಿಯಲಿ ಕೂದಲ ಹೊದರಲಿ
ಮೆಯ್ಮರೆದಡಗಿದ ತಗರುಗಳು,
ಕೂಗುತಿದ್ದವು; ನೆತ್ತರ ಹೆಜ್ಜೇನ
ಹುಟ್ಟುಗಳಂತಿರೆ ಕಟ್ಟಿದ್ದವು!

೯

ಕಾಡ ಮರೆಯಲಿ ಹೂವಿನಂತರಳಿದ–

ಮಾನಸಿಕೆಯು ಮುಗ್ದೆ! ಕಂಡವಳೆ

ನಾಡ ನಡೆಗಳ? ಸಾಕಿದ ಕರುಗಳ

ಗೋಣ್ಮುರಿಯುತ ಬಾಡನುಂಡವಳೆ?

ಗೀಳಿಡುವ ಮದದಾನೆಯ ಸುಂಡಿಲ

ಕೂಗು ಕಹಳೆಯಾಗೆ, ಮೊನೆಗೊಂಬಿನ

ಕಾಡ ಮೃಗಗಳ ಗೆದ್ದುಂಬ ಗೆಲವಿಗೆ

ಜೋಡಿಯಹುದ ಕೊಲೆ ಕುರಿಯಾಡಿನ?

೧೦

"ನಿನ್ನ ಮದುವೆಯ ಬಿದ್ದಿನ ಪೊರೆಯಾಗಿ

ಬೆಣ್ಣೆ ಬೆಳೆವ ನಾಡ ಮಂದೆಗಳು

ಬಂದುವ"ಸಲವರಲ್ಲಿಯ ನಿಂದಳು

ಕಣ್ಣೆವೆಯಲುಗದೆ ದೇವಿಪೊಲು,–

ಚಿನ್ನ ಕರಗಿ ಕುದಿವ ಕೋವೆಯಂತಿರೆ

ತನ್ನಿದಿರಲಿ ರವಿ ಮುಳುಗುತಿರೆ,

ಹೆಣ್ಣೆದೆಯ ಕರುಣೆಯ ಕೆಂಡ ಕೆದರಿರೆ,

ಕನ್ನೆ-ಮೊಗದ ಕಾಂತಿ ಹೊಸತಾಗಿರೆ.

೧೧

ಬಾಳು ಮಿಂಚಿತು, ತೋಳು ಮೇಲೆತ್ತಿತ್ತು,

ಕೇಳಿತು ಕೀಳಾಳುಗಳ ಹುಂಕೃತ,

ಹಾರುತಿರೆ ರಕ್ತ! ಚೀರುತಲಿರೆ ಮೊತ್ತ!

ತಾಳಲಾರದೆ ಬಾಲೆ ಕಂಗೆಡುತ.

"ಹಾಳು ಮದುವೆ"ಯೆಂದುಲಿದೊಳಸಾರ್ದಳು;—

ಮಾರಿಯೋಕುಳಿಯಿತ್ತ ಮಸಗುತ್ತಿತ್ತು;

ಮೇಳವತ್ತ ಕುಣಿಯುತಿತ್ತು, ಶಬರಿಯ

ಬಾಳ ಮೊದಲ ಸಂಧಿ ಮುಗಿಯುತಿತ್ತು!

೧೨

ರಾತ್ರಿ, ಸಂಜೆಯ-ಕಮ್ಮೆಣ್ಣೆ ಸವರುತ
ಹೆರೆಯು ಹಣೆಗೆಯಲಿ ತಲೆಯ ಬಾಚಿ,
ತಾರೆಗಳ ಹೂವ ಮುಡಿದು, ತಂಗಾಳಿಯ
ತೆಳುಸೆರಗಿಳಿಬಿಟ್ಟು, ನಳನಳಿಸಿ
ಕಾಡಿನೆಡೆಯಲಿ ಬೆಳ್ದಿಂಗಳ್ನಗೆಯಲಿ
ಕಾಲಿಡುತಲಿ ಬಂದು ಮೋಹಿಸಿತು
ಜೀವರಾಶಿಯನಾದರೆ ಶಬರಿಯ
ಮಾನಸಹಂಸವು ಮಿಡಿಯುತಿತ್ತು!

೧೩

ಭೀಮಕಾಯದ ಭಿಲ್ಲರು ಮದ್ಯದ
ಭಾಜನಗಳನಪ್ಪಿ ಮಲಗಿದರು
ತಾಳಿ ಕೆಡೆವಂತೆ; ಕನ್ನೆಯೆರಲ್ಲಲ್ಲಿ
ಕುಣಿವ ಕನಸುಗಳನಪ್ಪಿದರು;
ಮಾನಿನಿಯರು ಮಕ್ಕಳನಪ್ಪಿ—ಕಾಡನು
ಕಾರಿರುಳಪ್ಪಿ—ನಿದ್ರಿಸುತಿರಲು,
ಜೀವಮಣಿಯೊಂದು ಖನಿಯಿಂದ ನೆಗೆಯಿತು!—
ಧೀರೆ ಶಬರಿ ಹೊರಗಾಲಿಟ್ಟಳು!

೧೪

ಬಣ್ಣಬಣ್ಣದ ಬಡವುಜೀವಿಗಳನು
ಕೊಂದ ಮದುವೆ ಹೆಣ್ಣ ಮನಸಿನಲಿ
ಹುಣ್ಣ ತೋಡಿತು; ಸಂಸಾರದಾಶೆಯ
ಕಣ್ಣನು ಕಿತ್ತು ಗಂಟಲನೊತ್ತಿತು.
ಕಲ್ಲ ಸೆರೆಯಿಂದ ದುಮುಕುವ ತಿಳಿನೀರು
ಬಲ್ಲದೆ ತನ್ನ ಗುರಿಯ ದಾರಿಯ?
ಪುಣ್ಯಪರಿಪಾಕದಂತೆ ಹರಿವುದಲ್ತೆ?
ಕನ್ನೆಯಂತಿರೆ ನುಗ್ಗಿದಳು ಮುಂದಕೆ.

೧೫

ರಿಖಿಲ್ಲಿಗಳ ಜೀರುದನಿಯಲಿ ವಿಂಧ್ಯಾದ್ರಿ
ಕುಂಭಕರ್ಣನವೋಲು ಕೊರೆಯುತ್ತಿತ್ತು!
ಸಿಂಹಶೈಲದ ಶಿಖರದಿ ಮೃಗರಾಜ್ಯ-
ಸಿಂಹಾಸನವನೇರಿ ಮೊಳಗುತ್ತಿತ್ತು!
ಹುಲ್ಲ ಹಾಸಿಗೆಯಲಿ ವ್ಯಾಘ್ರದಂಪತಿ
ಗಂಭೀರನರ್ತನಭಂಗಿಗಳ
ಹೊಮ್ಮಿಸುತಲಿತ್ತು!—ಶಬರಿ ಮೆಯ್ದೋರಿದ
ವಿಂಧ್ಯವಾಸಿನಿಯೆನಲಡಿಯಿಟ್ಟಳು!

೧೬

ಎಲ್ಲಿ ನಡೆದಳೊ, ಎಲ್ಲೆಲ್ಲಿ ಸುಳಿದಳೊ,
ಬಲ್ಲಳೆ ತಾನೆ ತನ್ಮಯ ಮನಸು
ಕಲ್ಲೊ ನೀರೊ ಕುಳಿರೊ ಕಿಚ್ಚೊ ಆಗಿರೆ?
ನಿಲ್ಲದೆ ನಡೆದಳು ಹಗಲಿರುಳು;
ಕಣ್ಣ ಹೊಳಪಿಗೆ, ಕರೆಯುವ ಕರುಣೆಗೆ,
ಬಣ್ಣದ ನಿರಿಗೆ, ಹುಲ್ಲೆಗಳ ಹಿಂಡು
ತನ್ನ ಬಳಿ ಬರಲಪ್ಪಿ ಮುದ್ದಿಸಿ 'ತಂಗಿ!
ಅಣ್ಣ!' ಎಂದಳುತ ಮುಂದೈದಿದಳು.

೧೭

ಬೆಳ್ಳಿ ಮೂಡಲ ಮೂಗುತಿಯಾಗಿರೆ,
ಅಲ್ಲಲ್ಲಿ ತಂಗಾಳಿ ಚಿಗುರುತಿರೆ,
ಬಳ್ಳಿ ಗಿಡು ಹನಿಯಲಿ ಪುಲಕಿಸುತಿರೆ,
ಹೊಳೆ ಮಂಜುಮುಸುಕನು ನೂಕುತಿರೆ,
ಕಣ್ಣನರೆದೆರೆದುಬ್ಬಿಸಿ ಕೊರಳನು-
ಪಾಸೂಕ್ತವನು ಹಕ್ಕಿ ಹಾಡುತಿರೆ,
ಪುಣ್ಯಕಾಲದಿ ಶಬರಿ ಬಂದಿಳಿದಳು
ಧನ್ಯಾತ್ಮೆ! ತುಂಗಭದ್ರಾತೀರಕೆ,

# ಕೆಲವು ಶಬ್ದಾರ್ಥಗಳು

| ಕವನ | ಶಬ್ದ | ಅರ್ಥ |
|---|---|---|
| ಅರಿಕೆ | ಮಯಷ್ | ಕಾಡಿಗೆ, ಕಜ್ಜಲ |
| ಬೆಳಗಿನ ತಂಗಾಳಿ | ಶೇಫಾಲಿಕೆ | ಪಾರಿಜಾತ |
| ಖಂಡಚಂದ್ರ | ಕೋಮಳೆ | ನೈದಿಲೆ |
| ವಿಜಯನಗರಧ್ವಂಸ | ಕೋಲ | ಭೂತದ ಉತ್ಸವ |
| „ | ಗಗ್ಗರ | ಭೂತದ ಕಾಲಕಡಗ |
| „ | ಕಡಿತಲೆ | ಒಂದು ಬಗೆಯ ಖಡ್ಗ |
| ಎಣ್ಣೆ ಹೊಯ್ಯಮ್ಮ ದೀಪಕ್ಕೆ | ಅಳಗೆ | ಮಣ್ಣಿನ ಪಾತ್ರೆ |
| ಜಯಭಾರತಪುತ್ರ | ರೈವ | ರೇವಾ ನದೀಪ್ರದೇಶ (ರೇವಾ = ನರ್ಮದಾ) |
| ತರುಣಥಮನಿ (ಪದ್ಯ ೧೮) | ಬಾಳೆ | ಒಂದು ಜಾತಿಯ ಮೀನು |
| „ (ಪದ್ಯ ೪೨) | ಸಿಕ್ಕಿನ ಸಮಯ | ಸಂಕಟಕಾಲ |
| „ (ಪದ್ಯ ೫೨) | ಮುಗುಳಿ | ನೀರೊಳಗಿಂದ ಮೇಲೇಳುವ ಗುಳ್ಳೆ |
| „ (ಪದ್ಯ ೫೮) | ಸಿಂಗಾರ | ಅಡಕೆಮರದ ಹೂ |
| ಶ್ವಮೇಧ (ಪಂಕ್ತಿ ೫) | ನರಿಮೊಗರು | ದಕ್ಷಿಣ ಕನ್ನಡದ ಒಂದು ಹಳ್ಳಿ |
| „ (ಪಂಕ್ತಿ ೫೭) | ಮೂಲದಾಳು | ಜೀತದಾಳು |
| „ (ಪಂಕ್ತಿ ೫೮) | ಕುಡಿಯ | ಒಂದು ಕೀಳುಜಾತಿಯವನು |
| „ (ಪಂಕ್ತಿ ೧೧೨) | ತಿಳಿಯ ನೀರು | ಗಂಜಿನೀರು |
| „ (ಪಂಕ್ತಿ ೧೬೫) | ಮೋತೆ | ಬಾಳೆಯ ಹೂಮೊಗ್ಗೆ |
| „ (ಪಂಕ್ತಿ ೧೯೧) | ಮದಿಲು | ಹೆಬ್ಬಾಗಿಲುಳ್ಳ ಅಂಗಳದ ಆವರಣ, ಪೌಳಿ |
| „ (ಪಂಕ್ತಿ ೨೬೫) | ಮಜಲುಗದ್ದೆ | ಮಳೆಗಾಲದಲ್ಲಿ ಮಾತ್ರ ಬೆಳೆಯಾಗುವ ಗದ್ದೆ |
| ಪುಣ್ಯಲಹರಿ (ಪದ್ಯ ೮) | ನಲಿ | ಲಾಸ್ಯವಾಡು |

